# ಸಾಹಿತ್ಯ-ವಿಹಾರ



ಪುಸ್ತಕ ೧






ಶಿಕ್ಷಣ ಪ್ರಚಾರ ಸಾಹಿತ್ಯ ಸಮಿತಿ
ವಿಜಯಪುರ.

ಮುದ್ರಕರು
ಶ್ರೀ ಎನ್ ಎಚ್ ನಾಯಿಕ-ನೊಹರ
ಕರ್ನಾಟಕ ವೈಭವ ಮುದ್ರಣಾಲಯ
ವಿಜಯಪುರ

ಚತುರ್ಥ ಮುದ್ರಣ
೧೯೫೪
ಬೆಲೆ: ೧-೮-೦

ಪ್ರಕಾಶಕರು
ಶಿಕ್ಷಣ ಪ್ರಚಾರ ಸಾಹಿತ್ಯ ಸಮಿತಿಯ ಪ
ಶ್ರೀ. ಜಿ. ಜಿ. ಕುಲಕರ್ಣಿ
ಅಜರೇಕರ ಚಾಳ, ವಿಜ

ಮುಂಬಯಿ ವಿದ್ಯಾಖಾತೆಯವರಿಂದ ಪಠ್ಯ ಪುಸ್ತಕವೆಂದು ಮಂಜೂರಾಗಿದೆ

# ಸಾಹಿತ್ಯ ವಿಹಾರ

## ಪುಸ್ತಕ ೧

ಶಿಕ್ಷಣ ಪ್ರಚಾರ ಸಾಹಿತ್ಯ ಸಮಿತಿ
ವಿಜಯಪುರ

# ನಮ್ಮ ಮಾತು.

‘ಸಾಹಿತ್ಯ ವಿಹಾರದ’ ೨ ನೇ ಪುಸ್ತಕವನ್ನೇ ಮೊದಲು ಪ್ರಸಿದ್ಧ ಮಾಡಿ, ಒಂದು ಮತ್ತು ಮೂರನೆಯ ಪುಸ್ತಕಗಳನ್ನು ಪ್ರಕಟಿಸುವ ನಮ್ಮ ಯೋಜನೆಯನ್ನು ಓದುಗರ ಮುಂದೆ ಇಟ್ಟಂತೆ ಇದೀಗ ೧ನೆಯ ಪುಸ್ತಕವನ್ನು ಸಿದ್ಧಗೊಳಿಸಿ ಪ್ರಕಟಿಸಲು ಆನಂದವಾಗುತ್ತದೆ. ಮೂರನೆಯ ಪುಸ್ತಕವೂ ಅಚ್ಚಿನಲ್ಲಿದ್ದು ತೀವ್ರದಲ್ಲಿಯೆ ಹೊರಬೀಳಲಿದೆ. ಎರಡನೆಯ ಪುಸ್ತಕವನ್ನು ಪ್ರಸಿದ್ಧಿಸಿದಾಗ ಒಂದು ಮತ್ತು ಮೂರನೆಯ ಪುಸ್ತಕವನ್ನು ಹೊರಡಿಸುವುದಾದೀತೇ ಎಂಬ ಸಂಶಯವು ನಮ್ಮನ್ನಾವರಿಸದೆ ಇರಲಿಲ್ಲ. ಆದರೂ ಮೂರು ಸಾಹಿತ್ಯ ಸಂಕಲನಗಳನ್ನು ಒಂದು ಕ್ರಮವಿಡಿದು ಮಾಡಬೇಕೆಂದೂ, ಅದರಿಂದ ಕನ್ನಡದ ಅಭ್ಯಾಸದಲ್ಲಿ ವಿದ್ಯಾರ್ಥಿಗಳಿಗೆ ಒಂದು ದಾರಿದೋರಬೇಕೆಂದೂ ಇದ್ದ ನಮ್ಮ ಹಂಬಲವು ಈಗ ಕಾರ್ಯರೂಪಕ್ಕಿಳಿದಿದೆಯೆನ್ನಲು ಅಡ್ಡಿಯಿಲ್ಲ. ಎರಡನೆಯ ಪುಸ್ತಕದ ಮೊದಲ ಮಾತಿನಲ್ಲಿ ಹೇಳಿದಂತೆ ಗದ್ಯ ಪದ್ಯ ಪಾಠಗಳನ್ನು ಆರಿಸುವದರಲ್ಲಿ ಒಂದು ವಿಶಿಷ್ಟ ದೃಷ್ಟಿಯನ್ನೂ ಕ್ರಮವನ್ನೂ ಇಟ್ಟುಕೊಳ್ಳಲಾಗಿದೆಯೆಂಬುದನ್ನು ಇಲ್ಲಿಯೂ ಕಾಣಬಹುದು. ವಿಶೇಷವಾಗಿ ಈ ಸಂಗ್ರಹದಲ್ಲಿ ಹೊಸಗನ್ನಡದ ಗದ್ಯಶೈಲಿಯ ಪ್ರಾರಂಭದ ಅವಸ್ಥೆಯನ್ನು ತಿಳಿದುಕೊಳ್ಳುವಂತೆಯೂ ಮತ್ತು ಅದು ಬೆಳೆಯುತ್ತ ಬಂದ ರೀತಿ ಲಕ್ಷ್ಯದಲ್ಲಿ ಬರುವಂತೆಯೂ ಪಾಠಗಳನ್ನು ಆಯ್ದುಕೊಳ್ಳಲಾಗಿದೆ. ಮತ್ತು ಹಾಗೆ ಆಯ್ದುಕೊಳ್ಳುವಾಗ ಪಾಠಗಳಲ್ಲಿಯ ವಿಷಯವೂ ಕಠಿಣವಾಗದಂತೆ ನೋಡಿಕೊಳ್ಳಲಾಗಿದೆ. ಶ್ರೀ ಹೊನ್ನಾಪುರಮಠ, ರಾ. ಬ ಹಳಕಟ್ಟಿ, ದಿ. ಗಳಗನಾಥ ಮತ್ತು ಕೆರೂರ ವಾಸುದೇವಾಚಾರ್ಯ ಮೊದಲಾದವರ ಸುಳ

ಭವೂ ಸುಂದರವೂ ಆದ ಶೈಲಿಯ ರೀತಿಗಳನ್ನು ಇಲ್ಲಿ ಕಾಣ ಬಹುದು. ಪದ್ಯ ಭಾಗದಲ್ಲಿ ಷಟ್ಪದಿ, ಸಾಂಗತ್ಯ, ತ್ರಿಪದಿ ಮೊದ ಲಾದ ಛಂದಸ್ಸಿನ ವೈವಿಧ್ಯವುಳ್ಳ ಸುಲಭವಾದ ಕಥಾಭಾಗಗ ಗಳನ್ನೂ ಹೊಸಗನ್ನಡದಲ್ಲಿ ವರ್ಣನಾತ್ಮಕವಾದ ಸುಂದರ ಭಾವ ಗೀತಗಳನ್ನೂ ಹೆಚ್ಚಾಗಿ ಕೊಡಲಾಗಿದೆ. ಅಭ್ಯಾಸಗಳನ್ನು ಕೊಡುವ ವಿಚಾರದಲ್ಲಿಯೂ ಅನೇಕ ಮಾರ್ಪಾಟುಗಳನ್ನು ಮಾಡಲಾಗಿದೆ. ಲೇಖಕರ ಪರಿಚಯದ ವಿಚಾರದಲ್ಲಿ ಎರಡನೆಯ ಪುಸ್ತಕದಲ್ಲಿಯ ಮಾತುಗಳನ್ನೇ ಇಲ್ಲಿಯೂ ಅನುಸರಿಸಿದ್ದೇವೆ ಒಟ್ಟಾರೆ ಈ ಸಂಗ್ರಹವು ಕನ್ನಡ ಸಾಹಿತ್ಯಾಭ್ಯಾಸದಲ್ಲಿ ಪ್ರವೇಶವನ್ನು ಕೊಡುವ ದೃಷ್ಟಿಯಿಂದಲೂ 'ರುಚಿ' ಯ ಬೇವಣಿಗೆಯನ್ನುಂಟುಮಾಡುವ ರೀತಿಯಿಂದಲೂ ಒಂದು ವೈಶಿಷ್ಟ್ಯವುಳ್ಳದ್ದಾಗಿವೆಯೆನ್ನಬಹುದು

ಎರಡನೆಯ ಪುಸ್ತಕದಂತೆಯೇ ಇದನ್ನೂ ನಮ್ಮ ಶಿಕ್ಷಕ ಮಿತ್ರರು ತಮ್ಮ ಸಲಹೆ ಸೂಚನೆಗಳಿಂದ ಆದರಿಸುವರೆಂದು ನಂಬಿ ದ್ದೇವೆ. ಶಾಲೆ ಕಾಲೇಜುಗಳಲ್ಲಿ ಈ ಪುಸ್ತಕಗಳನ್ನು ಉಪಯೋ ಗಿಸುವದಾದಲ್ಲಿ ಮೂರನ್ನೂ ಮೂರು ವರ್ಗಗಳಿಗೆ ಒಂದು ಕ್ರಮ ದಿಂದ ಉಪಯೋಗಿಸಿಕೊಂಡರೆ ಹೆಚ್ಚು ಉಪಯುಕ್ತವಾದೀತೆಂದು ಹೇಳಬಯಸುತ್ತೇವೆ

ಮೂರೂ ಪುಸ್ತಕಗಳನ್ನು ಅಚ್ಚು ಹಾಕಿಸುವ ಭಾರವನ್ನು ಹೊತ್ತುಕೊಂಡು ಮುಂದೆ ಬಂದ ಗೆಳೆಯರಾದ ಶ್ರೀ ಬಾಡಗಂಡಿ ಮತ್ತು ಮಸರಗುಪ್ಪಿಯವರಿಗೆ ಸಮಿತಿಯು ತುಂಬಾ ಋಣಿಯಾ ಗಿದೆ. ಈ ಸಂಗ್ರಹಗಳನ್ನು ಸಿದ್ಧಪಡಿಸುವಾಗ ಅನೇಕ ಸಲಹೆ ಸೂಚನೆಗಳಿಂದ ಸಹಾಯ ಮಾಡಿದ ಮಿತ್ರರೆಲ್ಲರಿಗೂ ನಮ್ಮ ವಂದನೆಗಳು

— ಸಂಪಾದಕರು

# ಎರಡನೆಯ ಮುದ್ರಣ

ನಮ್ಮ ಸಮಿತಿಯ ಪರವಾಗಿ ಪ್ರಕಟವಾದ ಮೂರೂ ಪುಸ್ತಕಗಳನ್ನು ಮುಂಬಯಿ ಸರಕಾರದ ವಿದ್ಯಾಖಾತೆಯವರು ಮಾಧ್ಯಮಿಕ ಶಾಲೆಗಳಿಗೆ, ಪ್ರಾಥಮಿಕ ಪ್ರಮಾಣಪತ್ರ ಪರೀಕ್ಷೆಯವರ್ಗ ಹಾಗೂ ಟ್ರೇನಿಂಗ ಕಾಲೇಜುಗಳಿಗೆ ಪಠ್ಯಪುಸ್ತಕವೆಂದು ಮಂಜೂರು ಮಾಡಿದ್ದಲ್ಲದೆ ಈ ವರುಷ ಸರಕಾರೀ ಹಾಯಸ್ಕೂಲುಗಳಲ್ಲಿಯೂ ಉಪಯೋಗಿಸಬೇಕೆಂದು ವಿಧಿಸಿದ್ದಕ್ಕಾಗಿ ನಾವು ವಿದ್ಯಾಖಾತೆಯವರಿಗೆ ಕೃತಜ್ಞರಾಗಿದ್ದೇವೆ. ಅಲ್ಲದೆ ಈ ಪುಸ್ತಕಗಳನ್ನು ತಮ್ಮ ತಮ್ಮ ಹೈಸ್ಕೂಲುಗಳಿಗೆ ಪಠ್ಯಪುಸ್ತಕವಾಗಿ ಹಚ್ಚಿದ ಆ ಆ ಶಾಲೆಯ ಮುಖ್ಯಾಧ್ಯಾಪಕರಿಗೆ ನಾವು ತುಂಬಾ ಋಣಿಯಾಗಿದ್ದೇವೆ.

ದಕ್ಷಿಣ ಹೈದ್ರಾಬಾದ ಸರಕಾರದ ವಿದ್ಯಾಖಾತೆಯವರೂ ತಮ್ಮ ಸಂಸ್ಥಾನದ ಹೈಸ್ಕೂಲುಗಳ ೮, ೯, ೧೦, ನೇ ವರ್ಗಗಳಿಗೆ ಈ ಪುಸ್ತಕಗಳನ್ನು ಪಠ್ಯಪುಸ್ತಕವಾಗಿ ಉಪಯೋಗಿಸಲು ವಿಧಿಸಿದ್ದಕ್ಕಾಗಿ ಸಂಸ್ಥಾನದ ಮೆ॥ ಡಾಯರೆಕ್ಟರ ಸಾ॥ ರವರಿಗೂ, ವಿದ್ಯಾಖಾತೆಯವರಿಗೂ ನಾವು ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ನಮ್ಮ ಎಲ್ಲ ಪುಸ್ತಕಗಳನ್ನು ಸಹಾನುಭೂತಿಯಿಂದಲೂ, ಪ್ರೇಮದಿಂದಲೂ ಬರಮಾಡಿಕೊಂಡು ತಮ್ಮ ಸಕ್ರಿಯಸಹಾನುಭೂತಿಯನ್ನು ನೀಡಿದ ಎಲ್ಲ ಸಹೃದಯರಿಗೂ ನಾವು ನಮ್ಮ ಅಭಿನಂದನೆಗಳನ್ನು ಸಲ್ಲಿಸುತ್ತೇವೆ

ಈ ಮುದ್ರಣದಲ್ಲಿ ಸಾಧ್ಯವಿದ್ದಷ್ಟು ಅಚ್ಚಿನ ದೋಷಗಳು ಉಳಿಯದಂತೆ ಪ್ರಯತ್ನಿಸಲಾಗಿದೆ ಅಪ್ಪಿ ತಪ್ಪಿ ಉಳಿದ ಒಂದೆರಡು ದೋಷಗಳು ಸಾಮಾನ್ಯ ದೋಷಗಳೇ ಆಗಿವೆ. ಅವುಗಳನ್ನು ಓದುಗರು ತಪ್ಪು-ಒಪ್ಪೋಲೆಯನ್ನು ಗಮನಿಸಿ ಸರಿಪಡಿಸಿಕೊಳ್ಳುವರೆಂದು ನಂಬಿದ್ದೇವೆ.

ದ್ವಿತೀಯ ಮುದ್ರಣವನ್ನು ಇಷ್ಟು ಅಚ್ಚುಕಟ್ಟಾಗಿಯೂ ಸುಂದರವಾಗಿಯೂ ಮಾಡಿಕೊಟ್ಟದ್ದಕ್ಕಾಗಿ "ಕರ್ನಾಟಕ ವೈಭವ ಮುದ್ರಣಾಲಯು"ದ ಒಡೆಯರಾದ ಶ್ರೀಮಾನ್ ವೆಂ. ಭೀ. ನಾಯಕರವರಿಗೆ ತುಂಬಾ ಋಣಿಗಳಾಗಿದ್ದೇವೆ.

— ಸಂಪಾದಕರು

## ಮೂರನೆಯ ಮುದ್ರಣ

ಈಗಾಗಲೇ ಈ ಪುಸ್ತಕದ ಮೂರನೆಯ ಮುದ್ರಣವು ಹೊರಬೀಳುತ್ತಿರುವದು ಅದರ ಉಪಯುಕ್ತತೆಯನ್ನೂ ಲೋಕಪ್ರಿಯತೆಯನ್ನೂ ಸೂಚಿಸುತ್ತದೆ. ಈ ಪುಸ್ತಕದ ಮುದ್ರಣಕಾರ್ಯವನ್ನು ಅತ್ಯಲ್ಪ ಅವಧಿಯಲ್ಲಿ ಸುಂದರವಾಗಿ ಮಾಡಿಕೊಟ್ಟದ್ದಕ್ಕಾಗಿ "ಕರ್ನಾಟಕ ವೈಭವ ಮುದ್ರಣಾಲಯು"ದ ಸಂಚಾಲಕರಿಗೆ ನಾವು ಅತ್ಯಂತ ಋಣಿಯಾಗಿದ್ದೇವೆ ನಮ್ಮ ಅಲ್ಪ ಪ್ರಯತ್ನಕ್ಕೆ ನೆರವಿತ್ತು ನಮ್ಮನ್ನು ಪ್ರೋತ್ಸಾಹಿಸಿದ ಎಲ್ಲ ಮಹನೀಯರಿಗೆ ನಾವು ತುಂಬ ಕೃತಜ್ಞರಿದ್ದೇವೆ.

— ಸಂಪಾದಕರು

## ನಾಲ್ಕನೆಯ ಮುದ್ರಣ

ವಿಜಾಪೂರ ಜಿಲ್ಹೆಯ ಮಾಧ್ಯಮಿಕ ಶಾಲಾ ಮುಖ್ಯಾಧ್ಯಾಪಕ ಸಂಘದವರೂ, ಧಾರವಾಡ ಜಿಲ್ಹೆಯ ಮಾಧ್ಯಮಿಕ ಶಾಲಾ ಮುಖ್ಯಾಧ್ಯಾಪಕ ಸಂಘದವರೂ ಈ ಪುಸ್ತಕವನ್ನು ಈ ವರುಷ ೮ ನೆಯ ವರ್ಗಕ್ಕೆ ಪಠ್ಯಪುಸ್ತಕವೆಂದು ಗೊತ್ತುಪಡಿಸಿದ್ದರಿಂಧ ಈ ಮುದ್ರಣಕ್ಕೆ ಅವಕಾಶವಾಯಿತು. ಅವರಿಗೆ ನಮ್ಮ ಕೃತಜ್ಞತೆಗಳು "ಕರ್ನಾಟಕ ವೈಭವ ಮುದ್ರಣಾಲಯು"ದವರು ಇದನ್ನು ಅಲ್ಪಾವಧಿಯಲ್ಲಿ ಅಚ್ಚುಕಟ್ಟಾಗಿ ಅಚ್ಚು ಹಾಕಿಕೊಟ್ಟದ್ದಕಾಗಿ ಅದರ ಸಂಚಾಲಕರಾದ ಶ್ರೀ ನ. ಹ ನಾಯಕರಿಗೆ ನಮ್ಮ ಅಭಿನಂದನೆಗಳು

ಜೂನ ೧೯೫೪.

— ಸಂಪಾದಕರು

# ಪರಿವಿಡಿ

# ೧. ರಾಗದ ಸಂಕಣ್ಣ

ಕರ್ನಾಟಕ ದೇಶದಲ್ಲಿ ವಿಕ್ರಮಾದಿತ್ಯನೆಂಬ ರಾಜನು ರಾಜ್ಯ ವಾಳುತ್ತಿದ್ದನು ಅವನ ರಾಜಧಾನಿಯಲ್ಲಿ ಸಂಕಣ್ಣನೆಂಬ ಶಿವ ಶರಣನು ವಾಸಮಾಡಿಕೊಂಡಿದ್ದನು ಅವನು ಹಾಡುಗಾರಿಕೆ ಯನ್ನು ತಾನೇ ಕಲಿತುಕೊಂಡು ಅತ್ಯಂತ ಭಕ್ತಿಯುಳ್ಳವನಾಗಿ ಪದ-ಪದ್ಯಗಳನ್ನು ಶಿವಾಲಯದಲ್ಲಿ ಹೋಗಿ ತನ್ನ ಮನಸ್ಸಿಗೆ ಬಂದಂತೆ ಅಂದು ಬರುವನು ದೇವಾಲಯಕ್ಕೆ ಹೋಗಲು ಅವನು ಎಂದೂ ತಪ್ಪುತ್ತಿದ್ದಿಲ್ಲ ಜನರು ಅವನಲ್ಲಿದ್ದ ಭಕ್ತಿಭಾವವುಳ್ಳ ಹಾಡುಗಾರಿಕೆಗೆ ಮೆಚ್ಚಿದವರಾಗಿ ಅವನನ್ನು ರಾಗದ ಸಂಕಣ್ಣ ನೆಂದು ಕರೆಯುಹತ್ತಿದರು. ಒಂದು ದಿನ ವಿಕ್ರಮಾದಿತ್ಯನು ರಾಗದ ಸಂಕಣ್ಣನ ಈ ವಾರ್ತೆಯನ್ನು ಕೇಳಿ ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನ ಸ್ತೋತ್ರ-ಪದ್ಯಗಳನ್ನು ಕೇಳಿ ಅವನಿಗೆ- 'ಇನ್ನು ಮೇಲೆ ನೀನು ದಿನಾಲು ನನ್ನ ಓಲಗಕ್ಕೆ ಬಂದು ನಿನ್ನ ಹಾಡುಗಳನ್ನು ಅನ್ನುತ್ತಿರು' ಎಂದು ತಿಳಿಸಿದನು. ಅದೇ ಮೇರೆಗೆ

ಸಂಕಣ್ಣನು ರಾಜನ ಆಜ್ಞೆಯಂತೆ ಅವನಲ್ಲಿಗೆ ಹೋಗಿ ದಿನಾಲು ಅವನ ಮುಂದೆ ಶಿವಸ್ತೋತ್ರಗಳನ್ನು ಅಂದು ಬರುವನು. ಸಂಕಣ್ಣನ ಭಕ್ತಿಯನ್ನು ರಾಜನು ನೋಡಿ ಅತ್ಯಂತ ಪ್ರೀತನಾಗಿ ಅವನಿಗೆ ದಿನಾಲು ೧೨ ವರಾಹಗಳನ್ನು ಕಾಣಿಕೆಯಾಗಿ ಕೊಡುವನು. ಇವುಗಳನ್ನು ಸಂಕಣ್ಣನು ತನ್ನ ದಾಸೋಹಕ್ಕೆ ಉಪಯೋಗಿಸುತ್ತ ರಾಜನಲ್ಲಿ ಮನ್ನಣೆಯನ್ನು ಹೊಂದಿ ತನ್ನ ಕಾಯಕವನ್ನು ಮಾಡುತ್ತ ಬಂದನು

ಅರಸನಲ್ಲಿ ಬಹುಜನ ನಿಷ್ಣಾತರಾದ ಗಾಯಕರಿದ್ದರು. ಅವರು ಅರಸನು ಸಂಕಣ್ಣನನ್ನು ಈ ರೀತಿ ಮನ್ನಿಸುವದನ್ನು ನೋಡಿ ಸಂಕಣ್ಣನ ಸಲುವಾಗಿ ಅತ್ಯಂತ ಅಸೂಯಾ ಭಾವವನ್ನು ತಾಳಿದವರಾದರು. ಅವರು ಒಂದು ದಿವಸ ರಾಯನ ಎದುರಿಗೆ ಬಂದು "ನಾವು ನಿನ್ನ ಮುಂದೆ ಸಂಕಣ್ಣನೊಡನೆ ಸ್ಪರ್ಧೆಯಿಟ್ಟು ಹಾಡುವೆವು. ಕೇಳಬೇಕೆ"ಂದು ಹೇಳಿಕೊಳ್ಳಲು, ರಾಯನು ಅದಕ್ಕೆ ಸಮ್ಮತಿಸಿದನು. ಆಗ ಅವರು ಅವನಲ್ಲಿ ಒಟ್ಟಾಗಿ ಸೇರಿ ಅವನ ಮುಂದೆ ಅನೇಕ ರಾಗಗಳನ್ನು ಸಂಗೀತ ಶಾಸ್ತ್ರಕ್ಕೆ ಅನುಗುಣವಾಗಿ ನಾನಾ ವಿಧವಾಗಿ ಹಾಡಿ ತೋರಿಸಿದರು. ಆ ಮೇಲೆ ಸಂಕಣ್ಣನಿಗೂ ಹಾಡಲಿಕ್ಕೆ ಅವರು ಹಚ್ಚಲು, ಅವನು ತನ್ನ ಮನಸ್ಸಿಗೆ ಬಂದಂತೆ ರಾಗ ಮಾಡಿ ತೋರಿಸಿದನು. ಆಗ ಈ ವಿದ್ವಾಂಸರು, ಇವನಿಗೆ ರಾಗದ ಪರೀಕ್ಷೆ ಏನೂ ಇಲ್ಲ ಎಂದು ಅವನನ್ನು ಹೀಯಾಳಿಸಹತ್ತಿದ್ದರು ಆದರೆ ವಿಕ್ರಮಾದಿತ್ಯನು ಸದ್ಭಕ್ತನಾಗಿದ್ದನು. ಅವನು ಅವರಿಗೆ—"ಸಂಕಣ್ಣನು ಒಬ್ಬ ಶಿವ-ಶರಣನಿದ್ದಾನೆ, ಅವನು ಸತ್ಯನು;" ಎಂದು ನುಡಿದು ಅವನನ್ನು ಉಳಿದ ಗಾಯಕರಿಗಿಂತಲೂ ಹೆಚ್ಚಾಗಿ ಮನ್ನಿಸಿ ದಿನಕ್ಕಿಂತಲೂ ಅವನಿಗೆ ಹೆಚ್ಚು ಪಡಿಯನ್ನು ಕೊಟ್ಟು ಕಳಿಸಿದನು. ಇಷ್ಟೇ ಅಲ್ಲ ಅವನಿಗೆ "ರಾಗರಸಾಂಕ" ಎಂಬ ಬಿರುದನ್ನು ಕೊಟ್ಟನು. ಅದಕ್ಕೆ ಆ ಗಾಯಕರು—ರಾಜನು ಬುದ್ಧಿವಂತನಲ್ಲ; ಅವನಿಗೆ

ಗಾಯನ ವಿದ್ಯೆಯು ಏನೂ ತಿಳಿಯುವದಿಲ್ಲ ವಿದ್ಯೆಯಿಲ್ಲದವನನ್ನು ಅವನು ಹೆಚ್ಚಾಗಿ ಮನ್ನಿಸುತ್ತಾನೆಂದು ಮನಸ್ಸು ನೊಂದವರಾಗಿ ಓಲಗದಿಂದ ಹೊರಟು ಹೋದರು.

ಆದರೆ ಸಂಕಣ್ಣನು ಯಾರ ಮೇಲೆಯೂ ಕೋಪವನ್ನು ತಾಳಲಿಲ್ಲ. ಅರಸನು ತನ್ನನ್ನು ಬಹಳವಾಗಿ ಮನ್ನಿಸಿದನೆಂದು ಉಬ್ಬಲಿಲ್ಲ ಅವನು ಎಂದಿನಂತೆ ಶಿವಾಲಯದಲ್ಲಿ ಹೋಗಿ ಪರಮಾತ್ಮನನ್ನು ಬಹಳ ಭಕ್ತಿಯಿಂದ ಭಜಿಸಿ ಬರುವನು

ಹೀಗಿರಲು ಒಂದು ದಿನ ಗೌಳದೇಶದ ಒಬ್ಬ ಗಾಯಕನು ವಿಕ್ರಮಾದಿತ್ಯನ ಕೀರ್ತಿಯನ್ನು ಕೇಳಿ ಅವನ ರಾಜಧಾನಿಗೆ ಬಂದನು. ಅವನು ಅರಸನ ಓಲಗದಲ್ಲಿ ರಾಗರಸಾಂಕನು ಎಲ್ಲರಿಗಿಂತಲೂ ಮಿಗಿಲಾಗಿ ಮನ್ನಣೆ ಹೊಂದಿದವನಿದ್ದಾನೆಂಬುದನ್ನು ತಿಳಿದು ಅರಸನಲ್ಲಿಗೆ ಬಂದು–"ನಾನು ನಾಳಿನ ದಿವಸ ನಿಮ್ಮ ಸಭೆಯಲ್ಲಿ ನನ್ನ ಕೌಶಲ್ಯವನ್ನು ತೋರಿಸುತ್ತೇನೆ ಮತ್ತು ಇದರಲ್ಲಿ ರಾಗರಸಾಂಕನು ನನ್ನೊಡನೆ ಸ್ಪರ್ಧೆಗೆ ನಿಲ್ಲಬೇಕು" ಎಂದು ಕೇಳಿಕೊಳ್ಳಲು, ಅರಸನು " ಹಾಗೆಯೇ ಆಗಲಿ " ಎಂದು ಉತ್ತರ ಕೊಟ್ಟನು

ಈ ಸಂಗತಿಯು ಸಂಕಣ್ಣನಿಗೆ ತಿಳಿಯಿತು ಆಗ ಅವನು ಬಹಳ ಗಾಬರಿಯಾದನು. ಮುಂದೇನು ಮಾಡಬೇಕೆಂಬುದು ಅವನಿಗೆ ತಿಳಿಯದಾಯಿತು. ಅವನು ಕಡೆಗೆ ಪರಮಾತ್ಮನನ್ನೇ ಮೊರೆಹೋಗಬೇಕೆಂಬ ಇಚ್ಛೆಯುಳ್ಳವನಾಗಿ, ರಾತ್ರಿಯಾದ ಕೂಡಲೆ ಅವನು ಶಿವಾಲಯಕ್ಕೆ ಬಂದು ಪರಮಾತ್ಮನೆದುರಿಗೆ ನಿಂತು "ಪರಮಾತ್ಮನೇ, ನನಗೆ ಈಗ ಎಂಥ ಸಂಕಟ ಬಂದಿತು? ಇದರಲ್ಲಿ ನೀನೇ ನನ್ನನ್ನು ಕಾಯಬೇಕೆಂದು" ಪ್ರಾರ್ಥಿಸಿಕೊಂಡನು. ಆಗ ಲಿಂಗದೊಳಗಿಂದ ಒಂದು ಶಬ್ದವು ಉತ್ಪನ್ನವಾಗಿ ಅದು– "ಸಂಕಣ್ಣನೇ ಅಂಜಬೇಡ; ನಾಳೆ ಓಲಗದಲ್ಲಿ ನೀನು ಬಲ್ಲಂತೆ ಹಾಡು; ನಿನ್ನನ್ನು ನಾನು ಕಾಯುತ್ತೇನೆ." ಎಂದು ಹೇಳಿತು

ಗೌಳದೇಶದ ಗಾಯಕನು ರಾಜಧಾನಿಯಲ್ಲಿ ಬಂದು ಒಂದು ಗೃಹದಲ್ಲಿ ತನ್ನ ಮೇಳದವರೊಂದಿಗೆ ಇಳಿದುಕೊಂಡಿದ್ದನು ಆ ದಿನ ರಾತ್ರಿ ಬಹಳ ಘೋರವಾದ ಮಳೆಯು ಬೀಳಹತ್ತಿತ್ತು. ಕಾರ್ಗತ್ತಲೆಯು ಎತ್ತಲೂ ಮುಸುಕಿತ್ತು. ಅಂಥ ಸಮಯದಲ್ಲಿ ಪರಮಾತ್ಮನು ಕಟ್ಟಿಗೆಯ ಹೊರೆಯನ್ನು ಹೊತ್ತ ಬಾಲಕನ ರೂಪವನ್ನು ಧಾರಣಮಾಡಿ ಗಾಯಕನು ಇಳಿದಂಥ ಗೃಹದ ಮೊಗಸಾಲೆಯ ಮುಂದೆ ಬಂದು ಅಲ್ಲಿದ್ದ ಮರದಡಿಗೆ ಕಟ್ಟಿಗೆಯ ಹೊರೆಯನ್ನು ನಿಲ್ಲಿಸಿ ಹೆಬ್ಬಾಗಿಲಿನಲ್ಲಿ ಬಂದು ನಿಂತನು; ಆಗ ಮಳೆಯು ಒಂದೇಸವನೇ ಸುರಿಯುತ್ತಿತ್ತು. ಅವನ ಮೈಯೆಲ್ಲ ತೊಯ್ದು ಹೋಗಿತ್ತು ಅಂಥ ಸಮಯದಲ್ಲಿ ಆ ತರಳನು ತನ್ನ ಗಾಯನವನ್ನು ಆರಂಭಿಸಿದನು ಕಷ್ಟ ಸಮಯದಲ್ಲಿ ಗಾಯನವೇ ಸಮಾಧಾನವನ್ನುಂಟು ಮಾಡುವಂತಹದೆಂಬುದನ್ನು ತಿಳಿಸುವ ಬಗೆಯಿಂದಲೋ ಏನೋ ಎಂದೆನ್ನುವಂತೆ ಅವನು ದಿವ್ಯವಾದ ಇಂಪಾದ ಸ್ವರದಿಂದ ಪರಮಾತ್ಮನನ್ನು ಪ್ರಾರ್ಥಿಸತೊಡಗಿದನು. ಅವನು ಇಪ್ಪತ್ತೊಂದು ಶ್ರುತಿಯಲ್ಲಿ ವಿವಿಧ ರಾಗಗಳಿಂದ ಬಹು ಮಂಜುಳವಾಗಿ ಪದಗಳನ್ನು ಅನ್ನಹತ್ತಿದನು ಆಗ ಒಳಗಿದ್ದ ಗೌಳ ಗಾಯಕನು ಅದನ್ನು ಕೇಳಿ-ಇದು ಎಂಥ ಚೋದ್ಯವು! ಈ ತೆರನಾಗಿ ಹಾಡುವಂಥವನನ್ನು ನಾನು ಎಲ್ಲಿಯೂ ಕಂಡಿಲ್ಲ ಈ ಗಾಯಕನು ಮಹಾತ್ಮನಿರಬೇಕು; ಅವನು ಮನುಜನಲ್ಲ. ಎಂದು ಮನಸ್ಸಿನಲ್ಲಿ ನುಡಿಯುತ್ತ ಬಾಲಕನಿದ್ದಲ್ಲಿಗೆ ಬಂದು, ಅವನನ್ನು ಒಳಗೆ ಕರೆತಂದು-"ಭಲರೇ! ಭಲರೇ! ನೀನೆಂಥ ಗಾಯಕನು"!! ಎಂದು ಅವನನ್ನು ಕೀರ್ತಿಸಹತ್ತಿದನು ಇಷ್ಟೇ ಅಲ್ಲ, ತಾನು ಧಾರಣ ಮಾಡಿದ್ದ ಕಡಗ, ಪದಕ, ಪೆಂಡೆ ಇವುಗಳನ್ನು ಅವನ ಮುಂದಿಟ್ಟು ಇವುಗಳನ್ನು ತೆಗೆದುಕೋ, ಎಂದು ಹೇಳಿ ಅವನೆದುರಿಗೆ ಕರಗಳನ್ನು ಮುಗಿದುಕೊಂಡು ನಿಂತನು. ಆದರೆ ಆ ಬಾಲಕನು ಉತ್ತರವನ್ನೀಯದೆ ಪರಮಾತ್ಮನಲ್ಲಿ

ತಲ್ಲೀನನಾಗಿ ಪದ–ಪದ್ಯಂಗಳನ್ನು ಹಾಡುತ್ತ ನಿಂತನು. ಅವು ಮುಗಿದಬಳಿಕ ಗಾಯಕನು—"ಬಾಲಕನೇ, ನಿನಗೆ ಇಂಥ ಗಾಯನವನ್ನು ಕಲಿಸಿದವರಾರು ?" ಎಂದು ಕೇಳಲು—"ನಾನು ರಾಗರಸಾಂಕನ ಊಳಿಗದವನು. ನನಗೆ ಯಾರು ಹಾಡು ಕಲಿಸಿದರೆಂಬುದು ನನಗೆ ಗೊತ್ತಿಲ್ಲ. ಆದರೆ ನನ್ನ ಯಜಮಾನನು ಹಾಡುತ್ತಿರುವಾಗ ಅವನನ್ನು ಕೇಳಿಯೇ ನಾನು ಈ ಹಾಡುಗಳನ್ನು ಕಲಿತಿದ್ದೇನೆ ಇದಕ್ಕೂ ಹೆಚ್ಚಿಗೆ ನನಗೆ ತಿಳಿಯದು" ಎಂದನು. ಆಗ ಗೌಳಗಾಯಕನು ಈ ನುಡಿಯನ್ನು ಕೇಳಿದ ಕೂಡಲೇ ಬೆಬ್ಬಳಿಸಿ ಬಿದ್ದನು; ಗಾಬರಿಗೊಂಡನು. "ಹೀಗಿದ್ದರೆ ನಾಳೆ ರಾಗ-ರಸಾಂಕನ ಮುಂದೆ ನಾನೇನು ಹಾಡಲಿ," ಎಂಬ ವಿಚಾರವು ತಲೆದೋರಿ, ಇನ್ನು ಮೇಲೆ ಈ ಪಟ್ಟಣದಲ್ಲಿ ಇರುವದು ಒಳಿತಲ್ಲ. ದೇಶದ ಜನರಲ್ಲಿ ಬಹಿರಂಗವಾಗಿ ನನಗೆ ಅಪಯಶಸ್ಸು ಬರುವದೆಂದು ತಿಳಿದು, ಅದೇ ಕ್ಷಣವೇ ರಾತ್ರಿಯಲ್ಲಿ ತನ್ನ ಮೇಳದವರನ್ನು ಕರೆದುಕೊಂಡು ರಾಜಧಾನಿಯನ್ನು ಬಿಟ್ಟು ತೆರಳಿದನು.

ಆಗ ಪರಮಾತ್ಮನು ರಾಗರಸಾಂಕನಿದ್ದಲ್ಲಿಗೆ ಬಂದು—"ರಾಗರಸಾಂಕನೇ ಸಾವಧಾನದಲ್ಲಿರು. ನಿನ್ನ ಕೂಡ ಸ್ಪರ್ಧಿಸಲು ಬಂದಿದ್ದ ಗಾಯಕನನ್ನು ಓಡಿಸಿ ಬಿಟ್ಟದ್ದೇನೆ ಅಂಜದಿರು" ಎಂದು ಹೇಳಲು, ರಾಗರಸಾಂಕನು ಅವನ ಪಾದಕ್ಕೆ ಬಿದ್ದನು. ಆಗ ಪರಮಾತ್ಮನು ಅವನಿಗೆ—"ನಿನ್ನ ಭಕ್ತಿಪೂರ್ಣವಾದ ಹಾಡುಗಳಿಗೆ ನಾನು ಮೆಚ್ಚಿದ್ದೇನೆ ನನ್ನೊಡನೆ ಕೈಲಾಸಕ್ಕೆ ನಡೆ"ಯೆಂದು ಹೇಳಿ ಪುಷ್ಪಕ ವಿಮಾನದಲ್ಲಿ ಅವನನ್ನು ಕುಳ್ಳಿರಿಸಿಕೊಂಡು ತನ್ನೆಡೆಗೆ ಕರೆದೊಯ್ದು ಅವನನ್ನು ಗಣಪದವಿಯಲ್ಲಿರಿಸಿದನು.

ಶಿವಾನುಭವದ ಪ್ರಕಾರ ಗಾಯನವು ಭಕ್ತಿಯ ಸಲುವಾಗಿ ಇರುತ್ತದೆ ಅದು ಮನುಷ್ಯನಲ್ಲಿ ಭಕ್ತಿಯನ್ನು ಹೆಚ್ಚಿಸುತ್ತದೆ. ಆದ್ದರಿಂದ ಪರಮಾತ್ಮನು ಇದಕ್ಕೆ ಪ್ರೀತನಾಗುತ್ತಾನೆ. ಶಿವಶರಣ

ರಲ್ಲಿ ಗಾಯನದ ಕಾಯಕವನ್ನು ಕೈಕೊಂಡು ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದಿದವರು ಅನೇಕಗಿದ್ದಾರೆ ಅವರಲ್ಲಿ ರಾಗ ರಸಾಂಕನು ಒಬ್ಬನಿದ್ದಾನೆ. ಇವನು ಶಾಸ್ತ್ರೋಕ್ತ ರೀತಿಯಿಂದ ಗಾಯನವನ್ನು ಕಲಿತವನಲ್ಲ. ಅವನು ತನಗೆ ಬಂದಂತೆ ಹಾಡುವನು. ಆದರೂ ಪರಮಾತ್ಮನು ಅವನಿಗೆ ಮೆಚ್ಚಿದನು ಭಕ್ತಿಯುಕ್ತ ಗಾಯನದ ವಿಷಯವಾಗಿ ಬಸವೇಶ್ವರನು ತನ್ನ ಒಂದು ಉಕ್ತಿಯಲ್ಲಿ ಹೇಳಿರುವದೇನಂದರೆ:—

"ತಾಳಮಾನ ಸರಿಸವನರಿಯೆ. ಓಜ ಬಜಾವಣೆಯ ಲೆಕ್ಕವನರಿಯೆ. ಅಮೃತಗಣ ದೇವಗಣವನರಿಯೆ ಕೂಡಲಸಂಗಮದೇವ ನಿನಗೆ ಕೇಡಿಲ್ಲದಾಗಿ ಅನುವೊಲಿದಂತೆ ಹಾಡುವೆ."

ಫ. ಗು. ಹಳಕಟ್ಟಿ.



# ಪರಿಚಯ

ವಚನ ಸಾಹಿತ್ಯವನ್ನು ಬೆಳಕಿಗೆ ತಂದು ವಚನ ವಾಙ್ಮಯ ಪ್ರಪಿತಾಮಹರೆನಿಸಿದ ಶ್ರೀಮಾನ್ ಹಳಕಟ್ಟಿ ಫಕೀರಪ್ಪನವರನ್ನು ಅರಿಯದ ಕನ್ನಡಿಗರಿಲ್ಲ. ಕಳೆದ ಇಪ್ಪತ್ತೈದು ವರುಷಗಳಿಂದ ಅವರು ಕನ್ನಡ ಪ್ರಾಚೀನ ಸಾಹಿತ್ಯದ-ವಿಶೇಷವಾಗಿ ವೀರಶೈವ ಸಾಹಿತ್ಯದ ಸಂಶೋಧನ, ಪ್ರಕಾಶನ-ಕಾರ್ಯಗಳಲ್ಲಿ ಅವಿಶ್ರಾಂತ ವಾಗಿ ದುಡಿಯುತ್ತಿದ್ದಾರೆ. 'ನವಕರ್ನಾಟಕ' ವೆಂಬ ವಾರಪತ್ರಿ ಕೆಯೂ, 'ಶಿವಾನುಭವ'ವೆಂಬ ಮಾಸಿಕವೂ ಇವರ ಸಂಪಾದಕ ತ್ವದಲ್ಲಿ ಹೊರಡುತ್ತವೆ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪದವೂ ಇವರಿಗೆ ದೊರೆತಿದೆ. ಮುಂಬಯಿ ವಿಶ್ವವಿದ್ಯಾಲಯದ ಕನ್ನಡದ ಅಭ್ಯಾಸಮಂಡಲದಲ್ಲಿಯೂ ಕೆಲಸ ಮಾಡಿದ್ದಾರೆ. ಅವಿಶ್ರಾಂತ ಪರಿಶ್ರಮ, ಕಾರ್ಯನಿರ್ವಹಣದಲ್ಲಿ ಅಚ್ಚುಕಟ್ಟುತನ, ಇವುಗಳು ಇವರ ವೈಶಿಷ್ಟ್ಯವಾಗಿವೆ. ತಿಳಿಯಾದ ತೊಡಕಿಲ್ಲದ ಶೈಲಿ ಇವರ ವ್ಯಕ್ತಿತ್ವವನ್ನೇ ರೂಪಿಸುತ್ತಿದೆಯೆಂದರೆ ತಪ್ಪಾಗದು.

ಇಲ್ಲಿ ತೆಗೆದುಕೊಂಡ ಭಾಗವು ಇವರ 'ಶಿವಶರಣರ ಚರಿತ್ರೆ ಗಳು' ಭಾಗ ೧ ಈ ಗ್ರಂಥದಲ್ಲಿಯದು ಗಾಯನವನ್ನು 'ಕಾಯಕ' ವಾಗಿ ಮಾಡಿಕೊಂಡ ಶಿವಭಕ್ತನ ಕಥೆ ಇದರಲ್ಲಿದೆ

**ಟಿಪ್ಪಣಿಗಳು: —**

ದಾಸೋಹ; ನಾನು ದಾಸನೆಂಬ ಭಾವನೆ.

ಪಡಿ; ಸಂಭಾವನೆ.

ಶ್ರುತಿ; ಗಾನದಲ್ಲಿ ಮೇಳವಾಗುವ ಮುಖ್ಯ ನಾದ ಸಂಗೀತ ಶಾಸ್ತ್ರದಲ್ಲಿ ಇವು ೨೨ ಇರುವವೆಂದು ಹೇಳಲ್ಪಟ್ಟಿದೆ

ಬೆಬ್ಬಳಿಸು; (ಬೆಬ್ಬಳ+ಇಸು) ಭ್ರಾಂತನಾಗು, ಏನೂ ತೋಚ ದಿರು.

ಓಜ ಬಜಾವಣೆ; ವಾದ್ಯಗಳನ್ನು ಬಾರಿಸುವಿಕೆ.

ಅಮೃತಗಣ, ದೇವಗಣ, } ಛಂದಸ್ಸಿನ ಪ್ರಕಾರಗಳು.

ಕಾಯಕ; ಉದ್ಯೋಗ—ಶಿವಾನುಭವ ಶಾಸ್ತ್ರದಲ್ಲಿ "ಕಾಯಕ" ಈ ಶಬ್ದಕ್ಕೆ ಒಂದು ವಿಶಿಷ್ಟಾರ್ಥವಿರುತ್ತದೆ. ಕಾಯಕವೆಂದರೆ ಕೇವಲ ಉಪಜೀವನದ ಹೋರಿಯಲ್ಲ. ಶಿವಶರಣರಿಗೆ ಇದು ಅಧ್ಯಾತ್ಮಿಕ ಉನ್ನತಿಯ ಮಾರ್ಗವಾಗಿದೆ ನಿತ್ಯದ ಕಾಯಕವು ತಮ್ಮ ಉನ್ನತಿಗೆ ಸಹಾಯಕಾರಿಯಾಗುವಂತೆ ಆದನ್ನು ಶಿವಶರಣರು ಜರುಗಿಸುತ್ತಾರೆ. ಅವರು ನಿಂತಲ್ಲಿ, ನೋಡುವಲ್ಲಿ, ಮಾಡುವಲ್ಲಿ, ಭಾವಿಸುವಲ್ಲಿ, ಅರ್ಪಣಭಾವವುಳ್ಳವರಾಗಬೇಕು. ಈ ತತ್ವಗಳಂತೆ ಶಿವಶರಣರು ತಮ್ಮ ಕಾರ್ಯಗಳನ್ನು ಜರುಗಿಸುತ್ತಾರೆ.

# ಅಭ್ಯಾಸ

## ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ: –

(೧) ರಾಗದ ಸಂಕಣ್ಣನು ರಾಗರಸಾಂಕನಾದುದು ಹೇಗೆ?

(೨) ಗೌಳದೇಶದ ಗಾಯಕನನ್ನು ಯಾರು ಓಡಿಹೋಗುವಂತೆ ಮಾಡಿದರು? ಈ ಪ್ರಸಂಗವನ್ನು ಬಣ್ಣಿಸಿ ಬರೆಯಿರಿ

(೩) ಸಂಕಣ್ಣನ ಗಾಯನವಿದ್ಯೆಗೂ, ಇತರ ಗಾಯಕರ ವಿದ್ಯೆಗೂ ಯಾವ ಅಂತರವನ್ನು ಈ ಕತೆಯಲ್ಲಿ ತೋರಿಸಲಾಗಿದೆ? ಅದರಲ್ಲಿಯ ವಿಶೇಷವೇನು?

(೪) ವಿಕ್ರಮಾದಿತ್ಯನು ಸಂಕಣ್ಣನಲ್ಲಿ ಯಾವ ಮಹತ್ವವನ್ನು ಕಂಡಿದ್ದನು? ಅವನು ಸಂಗೀತ ಪ್ರಿಯನೂ, ವಿದ್ಯಾಪಕ್ಷಪಾತಿಯೂ ಆಗಿದ್ದನೆಂಬುದಕ್ಕೆ ಯಾವ ಯಾವ ಆಧಾರಗಳನ್ನು ಹೇಳುವಿರಿ?

(೫) ಸಂಕಣ್ಣನ ವಿಷಯಕವಾಗಿ ಬೇರೆ ಯಾವ ಯಾವ ಕಥೆಗಳು ಪ್ರಚಾರದಲ್ಲಿರುವವು?

(೬) ಹರಿದಾಸರೂ ಹೀಗೆಯೇ ದೇವರ ನಾಮಗಳನ್ನು ಹಾಡಿ ಪರಮಾತ್ಮನನ್ನು ಮೆಚ್ಚಿಸಿದವರಾಗಿದ್ದಾರೆ ಇಂತಹ ಒಬ್ಬಿಬ್ಬರು ಹರಿದಾಸರ ಕತೆಗಳನ್ನು ಹೇಳಿರಿ.

## ವಿಸ್ತರಿಸಿ ಬರೆಯಿರಿ:—

(೧) ಶಿವಾನುಭವದ ಪ್ರಕಾರ ಗಾಯನವು ಭಕ್ತಿಯ ಸಲುವಾಗಿ ಇರುತ್ತದೆ

(೨) ಕೂಡಲ ಸಂಗಮದೇವ ನಿನಗೆ ಕೇಡಿಲ್ಲವಾಗಿ ಅನು ಒಲಿದಂತೆ ಹಾಡುವೆ.

## ವ್ಯಾಕರಣ:—

### ಕಂಸದಲ್ಲಿ ಬರೆದಂತೆ ವಾಕ್ಯಗಳನ್ನು ಅರ್ಥ ಕೆಡದಂತೆ ಪರಿವರ್ತಿಸಿರಿ.

(ಅ) ದೇವಾಲಯಕ್ಕೆ ಹೋಗಲು ಅವನು ಎಂದೂ ತಪ್ಪುತ್ತಿದ್ದಿಲ್ಲ. [ಅಂಗೀಕಾರಾರ್ಥಕ 'Affirmative' ವಾಕ್ಯವನ್ನಾಗಿ ಮಾಡಿರಿ]

(ಆ) ನಾನು ನನ್ನ ಮನಬಂದಂತೆ ನಡೆಯಲು ಸಮರ್ಥನಿಲ್ಲವೆಂದಲ್ಲ (ಅಂಗೀಕಾರಾರ್ಥಕ ವಾಕ್ಯಮಾಡಿರಿ)

(ಇ) ಗಾಯಕರು ಸಂಕಣ್ಣನ ಸಲುವಾಗಿ ಅತ್ಯಂತ ಅಸೂಯೆಯ ಭಾವವನ್ನು ತಾಳಿದವರಾದರು. (ನಿಷೇಧಾರ್ಥಕ 'Negative' ವಾಕ್ಯವನ್ನಾಗಿ ಮಾಡಿರಿ.)

(ಈ) ರಾಯನು ಅದಕ್ಕೆ ಸಮ್ಮತಿಸಿದನು. (ನಿಷೇಧಾರ್ಥಕ ವಾಕ್ಯ ಮಾಡಿರಿ.)

(ಉ) ರಾಗರಸಾಂಕನಿಗೆ ಗಾಯನವಿದ್ಯೆಯು ಏನೂ ತಿಳಿಯುವದಿಲ್ಲ. (ಅಂಗೀಕಾರಾರ್ಥಕ ವಾಕ್ಯಮಾಡಿರಿ)

ಕೆಳಗಿನ ಸಾಮಾನ್ಯ (Simple) ವಾಕ್ಯಗಳನ್ನು ವಿಭಜಿಸಿರಿ:-

(೧) ಕರ್ನಾಟಕ ದೇಶದಲ್ಲಿ ವಿಕ್ರಮಾದಿತ್ಯನೆಂಬ ರಾಜನು ರಾಜ್ಯ ವಾಳುತ್ತಿದ್ದನು.

(೨) ಕಷ್ಟ ಸಮಯದಲ್ಲಿ ಆ ಬಾಲಕನು ದಿವ್ಯವಾದ, ಇಂಪಾದ ಸ್ವರದಿಂದ ದಯಾಳುವಾದ ಪರಮಾತ್ಮನನ್ನು ಪ್ರಾರ್ಥಿಸ ತೊಡಗಿದನು.



## ೨ ಹಂಪೆಯ ವಿಠ್ಠಲ ಸ್ವಾಮಿಯ ಗುಡಿ

ಆ ದೇವಸ್ಥಾನದಲ್ಲಿ ನೋಡಬೇಕಾದುದು ಮುಖ್ಯವಾಗಿ ಮೂರು; ಮುಖದ ಮಹಾಮಂಟಪ, ಪಕ್ಕದಲ್ಲಿರುವ ದೇವರ ಕಲ್ಯಾಣಮಂಟಪ, ಎದುರಿನಲ್ಲಿ ಸಣ್ಣ ಕಲ್ಲು-ರಥ ಪ್ರಾಕಾರದ ಒಳಗಡೆ ಅನೇಕ ಶಿಲಾಶಾಸನಗಳಿವೆ ಪ್ರಾಕ್ತನ ವಿಚಾರಕರು ಈ ಶಾಸನಗಳನ್ನು ಓದಿ ಚಾರಿತ್ರಿಕ ವಿಷಯಗಳನ್ನು ವಿಮರ್ಶೆ ಮಾಡಿ ತಿಳಿದುಕೊಳ್ಳಬಹುದು. ದೇವಸ್ಥಾನವನ್ನು ಪ್ರದಕ್ಷಿಣೆ ಮಾಡಿಕೊಂಡು ಮುಖಭಾಗಕ್ಕೆ ಬಂದು ನಿಂತರೆ ಅದೇನ, ಚಿತ್ರ-ಕೃತಿಯ ಸಂವಿಧಾನ ! ಏನು ಶಿಲ್ಪಕಲಾಕೌಶಲ್ಯ ! ದ್ರಾವಿಡ ಶೈಲಿಯ ವಾಸ್ತುರಚನೆಯಲ್ಲಿ ಈ ತೆರನಾದ ಇನ್ನೊಂದು ಶಿಲ್ಪ ಕೃತಿಯಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗದು. ಮಹಾ ಮಂಟಪಕ್ಕೆ ಹತ್ತಿ ಹೋಗಲು ಮಾಡಿರುವ ಮೆಟ್ಟಲುಗಳ ಎರಡು ಕಡೆಗಳಲ್ಲೂ ಸುಂದರವಾಗಿ ಕೆತ್ತಿ ಮಾಡಿದ, ಸರ್ವಾಲಂಕಾರ ಭೂಷಿತಗಳಾಗಿ ಮುಂಗಾಲ್ಗಳೆತ್ತಿ ನಿಂತಿರುವ ಮದಗಜಗಳು ಹಂಪೆಯಲ್ಲಿನ ಸರ್ವತ್ರ ಶಿಥಿಲಸ್ಥಿತಿಯು ಈ ಆನೆಗಳಿಗೂ ಬಂದಿದೆ. ಅವುಗಳ ಮುಖದಿಂದ ಸೊಂಡಿಲು ಕತ್ತರಿಸಿ ಹೋಗಿವೆ. ಮೇಲೆ ಹತ್ತಿಹೋಗಿ ನೋಡಿದರೆ ಸುತ್ತಲೂ ಸಾಲುಗಂಬಗಳು; ಎಲ್ಲವೂ ಒಂದೇ ಸಮನಾಗಿ ಸೌಂದರ್ಯೈಕ ದೃಷ್ಟಿಯಿಂದ ಮಾಡಿದುವು. ಗರ್ಭಗುಡಿಯ ಬಾಗಿಲುವರೆಗೆ ವಿಶಾಲವಾದ ಸ್ತಂಭಮಾರ್ಗ ಅವುಗಳ ಆಚೆಯಲ್ಲಿ ಉಪಕಂಬ ಸಾಲುಗಳು; ಮಧ್ಯೆ ಉಪರಂಗ; ಪ್ರತಿಯೊಂದು ಕಂಬದಲ್ಲಿಯೂ ಶರಭ-ಸಾಳ್ವಗಳ ಮೇಲೆ ಕುಳಿತ

ಪಹರೆಯುವರು. ಮೇಲ್ಗಡೆ ಪಟ್ಟಿಕೆಗಳಲ್ಲಿ ಸುತ್ತಲೂ ಚಿತ್ರಕೆಲಸ. ರಾಮಾಯಣ ಮಹಾಭಾರತಗಳಲ್ಲಿನ ಘಟನಾವಳಿಗೆ ಸಂಬಂಧ ಪಟ್ಟುವು. ನಾನು ಈ ವರೆಗೆ ನೋಡಿದ ನಾಟಕಶಾಲೆಗಳಲ್ಲಿನ ಯಾವ ಓಲಗದ ಪರದೆಯೂ ಇಷ್ಟು ಮನೋಹರವಾಗಿ, ಹೃದಯಾಪಹಾರಕವಾಗಿ ಇದ್ದುದನ್ನು ನೋಡಿರಲಿಲ್ಲ. ಅಲ್ಲಿಯೇ ಒಂದು ಕಡೆಯಿಂದ ಇನ್ನೊಂದು ಕಡೆಗೆ, ಒಂದು ಮೂಲೆಯಿಂದ ಇನ್ನೊಂದಕ್ಕೆ ಹೋಗಿ ಆ ಸೊಬಗನ್ನೇ ಅನುಭವಿಸುತ್ತಿರಬೇಕೆಂದು ಆಸೆ. ಉಳಿದವರು ಕಲ್ಯಾಣಮಂಟಪದ ಕಡೆಗೆ ಹೊರಟರು. 'ಸಾಕಪ್ಪಾ ಬನ್ನಿ' ಎಂದು ಕೂಗಿದರು. 'ಬಂದೆ' ಎಂದು ಹೇಳಿ ಕಣ್ಣು ತಪ್ಪಿಸಿಕೊಂಡು ಅವರಿಂದ ಮರೆಯಾಗಿ ಅಲ್ಲಿ ಇನ್ನೂ ಸ್ವಲ್ಪ ಹೊತ್ತು ಸುಳಿದಾಡಿದೆ ಇಲ್ಲಿ ಇಷ್ಟು ಶೃಂಗಾರವೇತಕ್ಕೆ ? ಎಂದು ಒಂದು ಸಲ ಪ್ರಶ್ನೆ ಬಂದಿತು ದೇವರು ಇಷ್ಟು ಸೌಂದರ್ಯವನ್ನು ಒಂದೇ ಕಡೆ ರಾಶಿಹಾಕಿ ಮಿಕ್ಕ ಭಾಗಗಳಿಗೆ ಬಡತನವನ್ನೇಕೆ ಕೊಟ್ಟನೋ ! ಅವನಿಗೂ ಹೀಗೆ ಪಕ್ಷಪಾತ ಬುದ್ಧಿ ಬಂದ ಮೇಲೆ ಸಾಮಾನ್ಯರು ನಿಷ್ಪಕ್ಷಪಾತಿಗಳಲ್ಲವೆಂದು ಅವರನ್ನು ಏಕೆ ಆಕ್ಷೇಪಿಸಬೇಕು ? ಎಂದುಕೊಂಡೆ. ಇಷ್ಟು ಸುಂದರವಾದ ಕಟ್ಟಡಕ್ಕೆ ಈ ದುಸ್ಥಿತಿಯು ಏಕೆ ಬರಬೇಕು, ಏನು ವಿಧಿ ಲೇಖನವೊ ! ಎಂದು ಇನ್ನೊಂದು ಸಲ ತೋರಿತು. ಈ ಸೌಂದರ್ಯಕ್ಕೆ ಸಾಫಲ್ಯವೇ ಇಲ್ಲವೇನು ? ಇಲ್ಲಿ ದೇವತಾವಿಗ್ರಹವಿಲ್ಲ. ಇಷ್ಟು ಸೊಗಸಾದ ಕಟ್ಟಡವು ತನ್ನಂಥವರಿಗೆ ತಕ್ಕುದಲ್ಲವೆಂದೂ, ಇಂಥ ಶೃಂಗಾರದ ನೆಲೆಯು ತನ್ನ ಯೋಗ್ಯತೆಗೆ ಹೆಡೆಯಬೆಂದೂ, ಮೀರಿದುದೆಂದೂ ಹೇಳಿ ವಿಠ್ಠಲ ಸ್ವಾಮಿಯು ಹಂಪೆಗೆ ಬಾರದೆ ಪಂಢರಪುರದ ತನ್ನ ಹಳೆಯ ಬಡಮಂದಿರದಲ್ಲೆ ನಿಂತು ಬಿಟ್ಟಿರಲ್ಲಿ, ಈ ಸೌಂದರ್ಯಕ್ಕೆ ಪವಿತ್ರತೆ ಹೇಗೆ ಬರಬೇಕು ? ದೇವರ ವಾಸವಿಲ್ಲದ ದೇವಸ್ಥಾನವು ಮಂಗಳಸ್ಥಾನವೆಂತಾದೀತು ? ಎಂದು ತೋರಿತು. ಉತ್ತರ ಕ್ಷಣದಲ್ಲಿಯೇ, ಛೀ ! ಸೌಂದರ್ಯವೇ

ಭಗವಂತನ ಪ್ರತಿರೂಪ! ಅದಕ್ಕೆ ಇತರ ಕರಣಗಳಿಂದ ಸಿದ್ಧಿ ಬರಬೇಕಾದ ಅವಶ್ಯಕತೆಯೇನಿದೆ? ಎಂದು ವಿವಿಧವಾಗಿ ಮನಸ್ಸು ಭ್ರಮಿಸತೊಡಗಿತು ಅಥವಾ ತಮ್ಮ ಕುಶಲತೆಯ ವಿಷಯದಲ್ಲಿ ಅಹಂಕಾರ ಪಟ್ಟು, ಹೆಮ್ಮೆಬುದ್ಧಿಯಿಂದಿರುವ ಈ ವಿಜಯನಗರದ ಅರಸರ ಸಮೀಪದಲ್ಲಿ ನಾನೇಕೆ ವಾಸಮಾಡಬೇಕು? ಅವರ ಉಚ್ಛ್ರಾಯದ ಉಪ್ಪರಿಗೆಗೆ ನಾನೇಕೆ ಸೋಪಾನ ಕಟ್ಟಕೊಡಬೇಕು? ಇದು ನನ್ನವರ ಸ್ವಾರ್ಥ ಸಾಮ್ರಾಜ್ಯ, ನಿಜ ಅದರೆ ನಮ್ಮವರೆಂದು ಮಲೆತವರನ್ನು ಶಿಕ್ಷಿಸದೆ ಬಿಡುವುದು ಯೋಗ್ಯವೆ? ಎಂದು ದೂರ ದಿಂದ ಅವರ ಕರ್ಮಗಳನ್ನು ಸುಮಾರು ಅರ್ಧಶತಮಾನದ ವರೆಗೆ ನೋಡಿ ತಡೆಯಲಾರದೆ ಕೋಪದಿಂದ ತಾನಾಗಿ ಕರುಣೆ ಯಿಂದಿತ್ತ ಆ ಸಾಮ್ರಾಜ್ಯವನ್ನು ನಾಶ ಮಾಡಿದನೇನೋ! ಎಂದೂ ಭಾವನೆ ಬಂದಿತು. ಭಾವನೆಗಳು ಹಾಗಿರಲಿ, ಆ ಸೌಂದರ್ಯ ವನ್ನು ನೋಡಿದರೆ-ಶಾಂತಂ ಪಾಪಂ- ಅಮಂಗಳವನ್ನು ನುಡಿ ಯಬಾರದು. ಅದು ಸಾಧ್ವಿಯ ಸಾತ್ವಿಕ ಸೌಂದರ್ಯದಂತೆ ಕಳೆ ಗೊಂಡಿರಲಿಲ್ಲ. ಅತುಳಲಾವಣ್ಯಮಯಿಯಾಗಿ, ಹಾವಭಾವ ವಿಲಾಸ ಗಳಿಂದ ಲೋಕವನ್ನು ಬೆರಗುಮಾಡಿ ಸೋಲಿಸುವ ನಾರಿಯ ಅಥವಾ ಚಿರವೈಧವ್ಯ ಪರಿಣತವಾಗಿ ವ್ಯರ್ಥವಾದ ನಾರಿಯ ಸೌಂದರ್ಯ ದಂತೆ ತೋರತೊಡಗಿತು. ಇನ್ನು ಒಬ್ಬನೇ ಅಲ್ಲಿರಲು ಸಾಧ್ಯವಾ ಗದೆ ಹೋಯಿತು. ಅಪವಿತ್ರ ಭಾವನೆಗಳನ್ನು ದೂರ ಮಾಡಲು ಸಂಗಡಿಗರಿದ್ದಲ್ಲಿಗೆ ಹೊರಟೆನು

ಅವರೆಲ್ಲರೂ ಕಲ್ಯಾಣಮಂಟಪವನ್ನು ಸೇರಿ ಅದನ್ನು ಪ್ರಶಂಸೆ ಮಾಡುತ್ತ ಮಂಟಪದ ಮಧ್ಯದಲ್ಲಿ ಕುಳಿತಿದ್ದರು. ಆ ಮಂಟಪವನ್ನು ನೋಡಿದೆ. ಮನಸ್ಸು ಪರವಶವಾದಂತಾಯಿತು. ಅದರ ಚಂದವು ದೇವಸ್ಥಾನದ ಮಹಾಮಂಟಪದ ಮೋಹಕತೆ ಯನ್ನು ಕೀಳು ಮಾಡಿ ಲಜ್ಜೆಗೊಳಿಸುವಂತಹದು. ಅಲ್ಲಿಯೂ ಹೀಗೇ ಕಂಬಸಾಲುಗಳು; ವಿಶಾಲವಾದ ಮಧ್ಯರಂಗ; ಅಕ್ಕ

ಪಕ್ಕಗಳಲ್ಲಿ ನಾಲ್ಕು ಕಡೆ ಉಪರಂಗಗಳು; ಒಂದೊಂದು ಕಂಬವೂ, ಒಂದೊಂದೇ ಕಲ್ಲಿನಿಂದ ಕಡೆದು ಕೆತ್ತಿ ಮಾಡಿದಂತಹುದು. ನಿಲುಗಂಬದ ಅಡಿಯ ಭಾಗದಲ್ಲಿ ಒಳಮುಖವಾಗಿ ಸಿಂಹ ಜಾತಿಯ ಮೃಗಗಳು; ಮಧ್ಯದಲ್ಲಿ ಪೀಠದ ಮೇಲೆ ಹೊರಮುಖವಾಗಿ ನಾಲ್ಕೈದು ಶಿಲಾದಂಡಗಳು; ಒಳಭಾಗದಲ್ಲಿ ಶಂಭಾಗೂಢರಾದ ಸವಾರರು. ಮಂಟಪದ ನಾಲ್ಕೂ ಕಡೆಯೂ ಹೀಗೆಯೇ. ವಿಧ ವಿಧವಾದ ನಯಂಗೆಲಸಗಳಿಂದ, ಶಿಲ್ಪಾಭರಣ-ಚಮತ್ಕೃತಿಗಳಿಂದ ಕೆತ್ತಿ ಸಿಂಗರಿಸಲ್ಪಟ್ಟಿರುವ ಕಂಬ, ವೇದಿಕೆ. ಮೇಲ್ಗಡೆ ಮಾಳಿಗೆಯ ಮೂಲೆವಾಟಗಳಲ್ಲಿ ಲೋವೆ-ಕಲ್ಲಗಳ ಮೇಲೆ ಪಕ್ಷಿಯ ರೆಕ್ಕೆಗಳಂತೆ ಶಿಲ್ಪ ಕೆಲಸ; ಲೋವೆಯ ಕೆಳಗೆ ಲಾಂದರುಗಳನ್ನು ತಗಲಿಹಾಕುವದಕ್ಕಾಗಿ ಮಾಡಿದ ಕಲ್ಲ-ಉಂಗರಗಳು. ಉತ್ತಮವಾದ ಸಹಜ ಸೌಂದರ್ಯವನ್ನು ವೃದ್ಧಿ ಮಾಡಲು ಅಂಗಾಂಗಗಳಿಗನುಗುಣವಾದ ಉಡುಗೆ ತೊಡುಗೆಗಳನ್ನು ಹಾಕಿ ಅಲಂಕರಿಸುವಂತೆ ಮಂಟಪದ ಒಳಮಾಳಿಗೆಯ ಪ್ರತಿಭಾಗವೂ ಸ್ಫುಟವಾಗಿ ಕಂಡು ಶೋಭಿಸುವಂತೆ-ಹಸಿರು, ನೀಲಿ, ಗುಲಾಬಿ, ಕೆಂಪು ಮುಂತಾದ ಬಣ್ಣಗಳಿಂದ ಅದನ್ನು ಹೆಚ್ಚು ಉಜ್ವಲವಾಗಿ ಕಾಂತಿಯುತವಾಗಿ ಮಾಡಿದ್ದಾರೆ. ಭವ್ಯಗಾನವೊಂದು ಘನೀಭೂತವಾಗಿ ಶಿಲಾಕೃತಿಯಾಗಿ ಪರಿಣಮಿಸಿದಂತೆ ಇಲ್ಲಿನ ನೋಟ. ಆ ರಾಜರ ಕಲಾಭಿರುಚಿ, ಅಲಂಕಾರದೃಷ್ಟಿ, ರಸಿಕತೆ ಇವುಗಳನ್ನು ಏನೆಂದು ಹೇಳೋಣ! ಆ ಚಿತ್ರಗಾರರು ಶಿಲ್ಪಿಗಳು ತಾನೇ ಎಂಥವರು! ಯಾವ ಚಕ್ರವರ್ತಿಯ ವಿವಾಹ ಮಂಟಪವು ಈ ತೆರನಾದ ಶಿಲ್ಪ ಕೌಶಲ್ಯವನ್ನು ತೋರಿಸಬಲ್ಲುದು! ಕಲ್ಯಾಣ-ಮಂಟಪವೆಂದರೆ ಇದಕ್ಕಲ್ಲವೆ ಆ ಹೆಸರು ಸಲ್ಲತಕ್ಕದ್ದು! ಎಂದುಕೊಂಡೆನು. ಆ ಅರಸರ ವೈಭವವೂ, ವ್ಯಯುಬ್ಬೂ ಎಂಥವಾಗಿದ್ದಿರಬೇಕು? ಪಂಪಾಪತಿಯ ದೇವಸ್ಥಾನದ ಮೇಲೆ ಬೆಳ್ಳಿ ಚಿನ್ನಗಳ ತಗಡುಗಳಿಂದ ಹೊದ್ದಿಕೆಗಳನ್ನು ಮಾಡಿಸಿ ಅದನ್ನು ಕಾಪಾಡುತ್ತಿದ್ದರಂತಲ್ಲ!

ತಾವು ಮಾಡಿದ ಪ್ರತಿಯೊಂದು ಕೆಲಸವೂ ಚಿರಯಶಸ್ವಿಯಾಗಿ, ಆಚಂದ್ರಾರ್ಕವಾಗಿ ನಿಲ್ಲಲೆಂದು ಜಗತ್ತನ್ನು ಅಚ್ಚರಿಗೊಳಿಸಲು ಮಾಡಿದಂತಹುದು; ಎಷ್ಟು ಅಲ್ಪ ಅವಧಿಯಲ್ಲಿ ಎಷ್ಟು ಮಹ ತ್ಕಾರ್ಯ ಸಾಧನೆಗಳು ! ಯಶೋಹೀನರಾಗಿ ಅನಾಮಧೇಯ ರಾಗಿ ಒಂದು ಶತಮಾನ ಕಾಲ ಬದುಕಿ ಕ್ರಿಮಿಗಳಂತೆ ಜೀವಿ ಸಿದ್ದು, ತಾವು ದೀರ್ಘಜೀವಿಗಳೆನ್ನಿಸಿಕೊಳ್ಳುವದಕ್ಕಿಂತ ಪ್ರಚಂಡ ಸತ್ವಶಾಲಿಗಳಾಗಿ, ಕೀರ್ತಿಮಹಿಮಾನ್ವಿತರಾಗಿ ನಾಲ್ಕು ದಿನ ಬಾಳಿ ಹೋಗುವುದು ಘನತರವಾದದ್ದಲ್ಲವೇ ಎನ್ನಿಸಿತು. ಬರಿಯ ಆಯುಷ್ಯಕ್ಕೆ ಮಡ್ಡ ಜನರು ಏಕೆ ಆಶೆ ಪಡುವರೋ ! ಆಯು ಷ್ಯದ ವಿಷಯದಲ್ಲಿ ನಮ್ಮ ಭಾವನೆ ಹಾಗಾಗಿ ಹೋದರೆ ನಮ ಗಿಂತಲೂ ಶತಾಧಿಕವಾಗಿ - ಶತ ಸಹಸ್ರಾಧಿಕವಾಗಿ-ಇರುವ ಆ ಕಲ್ಲು ಬಂಡೆಗಳು ಶ್ರೇಷ್ಠವಾದುವಲ್ಲವೇ ? ............ಅದು ಹೋ ಗಲಿ-ಯಾವ ಚಿತ್ರಗಾರನು ತನ್ನ ಚಿತ್ರಗಳನ್ನು ಇಷ್ಟು ಉಜ್ವ ಲವಾಗಿ, ಸುಂದರವಾಗಿ, ಸಜೀವವಾಗಿ ಚಿತ್ರಿಸಬಲ್ಲನೋ ನಾನ ರಿಯೆ. ಸಂಧ್ಯಾರುಣರಾಗಗಳಿಂದ ಬಣ್ಣಗೊಂಡು ವಿಧವಿಧವಾಗಿ ಕಾಂತಿಪಡೆದು ಕ್ಷಣ ಕ್ಷಣಕ್ಕೂ ಹೊಸ ಶೃಂಗಾರಗಳನ್ನು ತೋ ರಿಸಿ ಮೋಹಿಸುವ ಮುಗಿಲಿನ ಶ್ರೇಣಿಗಳು ಒಂದೊಂದೂ ತಮ್ಮ ಷ್ಟಕ್ಕೆ ತಾವೇ ಕೂಡಿ-ಬಂದು ಈ ರೀತಿಯಲ್ಲಿ ಆಕಾರ ತಾಳಿ ಘನಿಷ್ಠವಾಗಿ ಇಲ್ಲಿ ಊರಿ-ನಿಂತು ಬಿಟ್ಟಿರುವಂತೆ ಈ ಮಂಟಪವು ಶೋಭಿಸುವುದಲ್ಲ ! ಒರಟಾದ ಜಡವಾದ ಕಲ್ಲಿಗೆ ಹೀಗೆ ಜೀವ ಕಳೆ ತುಂಬುವವನು ಸೃಷ್ಟಿಕರ್ತನಿಗೆ ಸಮಾನನಲ್ಲವೇ ! ಇಹದಲ್ಲಿ ಸೃಷ್ಟಿಕರ್ತನೆಂಬುವವನಾರಾದರೂ ಇರುವನಾದರೆ, ಅಂಥವನು ಕಲಾನಿಪುಣನೆಂದೂ, ಆ ಕೆಲಸವು ಕವಿ, ಚಿತ್ರಕ, ಶಿಲ್ಪಿ, ಗಾಯಕ ಇವರುಗಳಿಗಲ್ಲದೆ ಇತರರಿಗೆ ಸಾಧ್ಯವಾಗದೆಂದೂ, ತಮ್ಮ ತಮ್ಮ ಇಲಾಖೆಗಳಲ್ಲಿ ಅವರು ಸರ್ವನಿಯಾಮಕರೆಂದೂ, ಅವರು ಶ್ರೇಷ್ಠರಾದರೆ ನಿಜವಾಗಿಯೂ ಬ್ರಹ್ಮರೇ ಎಂದೂ ಎನ್ನಿಸಿತು.

— ವೀ. ಸೀ.

# ಪರಿಚಯ

ವೀ. ಸೀತಾರಾಮಯ್ಯ ಎಂಬುದು ಇವರ ಪೂರ್ಣ ಹೆಸರು. "ವೀ ಸೀ. ಎಂಬುದು ಇವರ ಕಾವ್ಯನಾಮ ಇವರು ಈಗ ಚಿಕ್ಕಮಗಳೂರ ಆರ್ಟ್ಸ್-ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾರೆ. ಇವರು ಪ್ರತಿಭಾವಂತ ಕವಿಗಳೂ, ಒಳ್ಳೇ ಮಾತುಗಾರರೂ, ಕುಶಲರಾದ ಪ್ರಬಂಧ ಲೇಖಕರೂ ಆಗಿದ್ದಾರೆ. ಇವರು "ಗೀತಗಳು" "ನೆರಳು-ಬೆಳಕು" ಮೊದಲಾದ ಗೀತಸಂಗ್ರಹಗಳನ್ನೂ "ಪಂಪಾ ಯಾತ್ರೆ" ಎಂಬ ಪ್ರಬಂಧವನ್ನೂ ಬರೆದು ಕನ್ನಡಿಗರಿಗೆ ಚಿರ-ಪರಿಚಿತರಾಗಿದ್ದಾರೆ.

ಇಲ್ಲಿ ಆಯ್ದುಕೊಂಡ ಭಾಗವು ಇವರ "ಪಂಪಾಯಾತ್ರೆ" ಎಂಬ ಗ್ರಂಥದೊಳಗಿನದು.

**ಟಿಪ್ಪಣಿಗಳು:—**

ಪ್ರಾಕ್ತನ ವಿಚಾರಕರು; ಹಿಂದಿನದನ್ನು ಶೋಧಿಸುವವರು.

ಸಂವಿಧಾನ; ಹೊಂದಿಕೆ

ದ್ರಾವಿಡ ಶೈಲಿ- ದ್ರಾವಿಡ ಶೈಲಿಯಲ್ಲಿ ಅಥವಾ ಮಾರ್ಗದಲ್ಲಿ, ದೇವಾಲಯಗಳಲ್ಲಿ ಪ್ರಧಾನ ದೇವತೆಯಿರುವ ಗರ್ಭಗೃಹಕ್ಕಿಂತಲೂ ಮಹಾದ್ವಾರಗಳೂ, ಗೋಪುರಗಳೂ, ಸುತ್ತು ಮಂಟಪಗಳೂ, ರಾಜಾಂಗಣಕ್ಕೆ ಪ್ರಧಾನವೂ ಕಲಾದೃಷ್ಟಿಯಿಂದ ಶ್ರೇಷ್ಠವೂ ಆಗಿರುತ್ತವೆ.

ಪಟ್ಟಿಕೆ; ಬಾಗಿಲಮೇಲಿನ ಹಲಿಗೆ.

ಉಚ್ಛ್ರಾಯ; ಎತ್ತರ.

ಸ್ಮಾರ್ತ; ನೆನಪಿನಲ್ಲಿಡತಕ್ಕ, ಮರೆಯದ

ಕಳೆಗೊಂಡಿರು; ಸುಂದರವಾಗಿರು.

ಪರಿಣತವಾಗಿ; ವಯಸ್ಸಾಗಿ (ಮುದುವೆಯಾಗಿ)

ಘನೀಭೂತವಾಗಿ; ಘಟ್ಟಿಯಾಗಿ.

## ಅಭ್ಯಾಸ:—

ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

(೧) ಹಂಪೆಯಲ್ಲಿಯ ಮಹಾಮಂಟಪದ ಶಬ್ದ-ಚಿತ್ರವನ್ನು ನಿಮ್ಮ ಶಬ್ದಗಳಲ್ಲಿ ಕೊಡಿರಿ.

(೨) ಮಹಾಮಂಟಪವನ್ನು ನೋಡಿ ಗ್ರಂಥಕರ್ತರಿಗೆ ಸೂಚಿಸಿದ ಬೇರೆ ಬೇರೆ ವಿಚಾರಗಳನ್ನು ತಿಳಿಯಾದ ಭಾಷೆಯಲ್ಲಿ ಬರೆಯಿರಿ

(೩) ಕಲ್ಯಾಣಮಂಟಪದ ವರ್ಣನೆಯನ್ನು ಸುಲಭವಾದ ಶೈಲಿಯಲ್ಲಿ ಬರೆಯಿರಿ.

(೪) ಕಲ್ಯಾಣಮಂಟಪದ ಸೌಂದರ್ಯವನ್ನು ನೋಡಿ ಗ್ರಂಥಕರ್ತರು ಯಾವ ವಿಚಾರಗಳಲ್ಲಿ ಮಗ್ನರಾದರು ?

## ಹೆಚ್ಚಿನ ಓದು:—

(೫) 'ಪಂಪಾಯಾತ್ರೆ'ಯಲ್ಲಿ ೧೪, ೧೫ನೆಯ ಪುಟಗಳಲ್ಲಿ ಬಂದ ಲಕ್ಷ್ಮೀನಾರಾಯಣಸ್ವಾಮಿಯ ದೇವಸ್ಥಾನದ ವರ್ಣನೆಯನ್ನು ಓದಿ.

## ಸ್ಪಷ್ಟೀಕರಿಸಿರಿ:—

(೧) ಭಕ್ತಿಗಾನವೊಂದು ಘನೀಭೂತವಾಗಿ ಶಿಲ್ಪಾಕೃತಿಯಾಗಿ ಪರಿಣಮಿಸಿದಂತೆ ಇಲ್ಲಿಯ ನೋಟ.

(೨) ಬರಿಯ ಆಯುಷ್ಯಕ್ಕೆ ಮುದ್ದು ಜನರು ಏಕೆ ಆಶೆಪಡುವರೋ ?

## ವ್ಯಾಕರಣ:—

ಕಂಸದಲ್ಲಿ ಬರೆದಂತೆ ಕೆಳಗಿನ ವಾಕ್ಯಗಳನ್ನು ಅರ್ಥಕ್ಕೆ ಬಾಧೆ ಬರದಂತೆ ಪಲ್ಲಟಿಸಿರಿ:—

೧) ಏನು ಶಿಲ್ಪಕಲಾಕೌಶಲ್ಯ ! [ನಿಶ್ಚಯಾರ್ಥಕ ( statement ) ವಾಕ್ಯ ಮಾಡಿರಿ. ]

(೨) ಆ ಚಿತ್ರಗಾರರು ಶಿಲ್ಪಿಗಳು ತಾನೇ ಎಂಥವರು ! ( ನಿಶ್ಚಯಾರ್ಥಕ ವಾಕ್ಯಮಾಡಿರಿ. )

(೧) ಆ ಅರಸರ ವೈಭವವೂ, ಪ್ಯೆಯುಬ್ಬೂ ಅಪಾರವಾಗಿರಬೇಕು.
[ಭಾವಬೋಧಕ (Exclamatory) ವಾಕ್ಯಮಾಡಿರಿ.]

(೨) ಪ್ರಚಂಡ ಸತ್ವಶಾಲಿಗಳಾಗಿ, ಕೀರ್ತಿಮಹಿಮಾನ್ವಿತರಾಗಿ ನಾಲ್ಕು ದಿನ ಬಾಳಿ ಹೋಗುವುದು ಘನತರವಾದದ್ದಲ್ಲವೇ ?
(ಭಾವಬೋಧಕ ವಾಕ್ಯಮಾಡಿರಿ.)

(೩) ಸುಭಾಷರು ಎಂಥ ದೊಡ್ಡ ದೇಶಭಕ್ತರು! (ಪ್ರಶ್ನಾರ್ಥಕ ವಾಕ್ಯಮಾಡಿರಿ.)

**ರೂಪಸಿದ್ಧಿ ಹೇಳಿರಿ:—**

ಹಾಡುಗಾರಿಕೆ, ನೋಟ, ಚಿತ್ರಕ, ಗಾಯಕ, ಹೆಮ್ಮೆ

**ವಿಗ್ರಹಮಾಡಿ ಸಮಾಸದ ಹೆಸರು ಹೇಳಿರಿ.—**

ನಿಲುಗಂಬ, ಕಲ್ಯಾಣಮಂಟಪ, ಮುಂಗಾಲ್ಗಳು, ಮದಗಜ.



# ೩. ವಿದ್ಯಾಮಂದಿರದಿಂದ ಚಂದ್ರಾಪೀಡನ ಬರುವಿಕೆ.

**ಬಲಾಹಕನು** ಆ ವಿದ್ಯಾಮಂದಿರಕ್ಕೆ ಹೋಗಿ, ತಾನು ಬಂದದ್ದನ್ನು ರಾಜಪುತ್ರನಿಗೆ ದ್ವಾರಪಾಲಕನ ಮುಖದಿಂದ ಅರಿಕೆ ಮಾಡಿಸಿ, ಅಪ್ಪಣೆ ಪಡಕೊಂಡು, ಒಳಗೆ ಹೋಗಿ, ತಲೆಬಾಗಿ ನೆಲಮುಟ್ಟಿ ಮುಜುರೆ ಮಾಡಿ, ಕುಳಿತುಕೊಳ್ಳಲಪ್ಪಣೆಯಾದ ಬಳಿಕ ಕೆಳಗೆ ಕುಳಿತುಕೊಂಡು ವಿನಯದಿಂದ— "ಜೀಯಾ, ನೀವು ಸಕಲ ವಿದ್ಯೆಗಳಲ್ಲಿ ಪ್ರವೀಣರಾದದ್ದನ್ನು ಕಂಡು, ಅರಸರು ಇಂದಿಗೆ ತಮ್ಮ ಮನೋರಥವು ಪೂರ್ಣವಾಯಿತೆಂದು ಬಗೆದು ನಿಮ್ಮನ್ನು ರಾಜಮಂದಿರಕ್ಕೆ ಕರಕೊಂಡು ಬರಬೇಕೆಂದು ನನ್ನನ್ನು ಕಳಿಸಿದ್ದಾರೆ ಗುರುಗಳು ನಿಮಗೆ ಹೋಗಲಪ್ಪಣೆಕೊಟ್ಟರು ಯಾವಾಗ ನಿಮ್ಮ ದರ್ಶನ ತಕ್ಕೊಂಡೇವೋ ಎಂದು ಸಾವಿರಾರು ಮಂದಿ ರಾಜಪುತ್ರರು ಮಾರ್ಗ ನಿರೀಕ್ಷಿಸುತ್ತ ಮಹಾದ್ವಾರದಲ್ಲಿ ಬಂದು ನಿಂತಿದ್ದಾರೆ. ನೀವು ಈ ವಿದ್ಯಾಮಂದಿರಕ್ಕೆ ಬಂದು ಹತ್ತು ವರ್ಷವಾಯಿತು; ಬರುವಾಗ ಆರು ವರ್ಷದವರಿದ್ದಿರಿ, ಈಗ ನಿಮಗೆ ಹದಿನಾರನೆಯ ವರ್ಷ ನಡೆಯುತ್ತದೆ; ಇನ್ನು ಪಟ್ಟಣಕ್ಕೆ ಬಂದು ಪ್ರಜೆಗಳನ್ನು ಪಾಲಿಸಿ ಎಲ್ಲರಿಗೂ ಸುಖಕೊಟ್ಟು ನೀವೂ ರಾಜ್ಯ ಸುಖೋಪಭೋಗವನ್ನು ತಕ್ಕೊಳ್ಳಬೇಕು; ನಿಮ್ಮ ಸಲುವಾಗಿ **ಇಂದ್ರಾಯುಧ**ವೆಂಬ ಕುದುರೆಯು ಸಿದ್ಧವಾಗಿ ಬಂದು ಹೊರಗೆ ನಿಂತಿದೆ; ಈ ಅಶ್ವರತ್ನವನ್ನು ಪಾರಸೀ ದೇಶದ ಬಾದಶಹನು ನಮ್ಮ ಮಹಾರಾಜರಿಗೆ ಕಾಣಿಕೆ ಕೊಟ್ಟಿದ್ದಾನೆ. ಇದರ ವೇಗವು ವಾಯು ವೇಗಕ್ಕಿಂತ ಮಿಗಿಲಾಗಿದೆ; **ಇಂದ್ರ**ನ ಉಚ್ಚೈಶ್ರವಸದ ಲಕ್ಷಣ

ಗಳು ಇದಕ್ಕೆ ಉಂಟೆಂದು ಅಶ್ವಪರೀಕ್ಷರು ಹೇಳುತ್ತಾರೆ." ಎಂದು ಹೇಳಿ **ಬಲಾಹಕನು** ಸುಮ್ಮನಾದನು **ಚಂದ್ರಾಪೀಡನು** ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಹೊರಡಲುದ್ಯುಕ್ತನಾಗಿ ಇಂದ್ರಾಯುಧವನ್ನು ಒಳಗೆ ತರಹೇಳಿದನು. ಒಳಗೆ ಬಂದ ಕೂಡಲೆ ಸಕಲ ಲಕ್ಷಣ ಸಂಪನ್ನವಾದ ಕುದುರೆಯನ್ನು ನೋಡಿ **ಚಂದ್ರಾಪೀಡನು** ವಿಸ್ಮಿತನಾಗಿ ಮನದೊಳಗೆ "ಸ್ವರ್ಗಾಧಿಪತಿಯಾದ ಇಂದ್ರನ ಐಶ್ವರ್ಯಕ್ಕಿಂತ ನಮ್ಮ ತಂದೆಯ ಐಶ್ವರ್ಯವು ಮಿಗಿಲಾಯಿತು. ಸ್ವರ್ಗಲೋಕದಲ್ಲಿ ಸಹ ದುರ್ಲಭವಾದ ರತ್ನಗಳು ಈತನ ಅರಮನೆಯಲ್ಲುಂಟು ನೋಡಿರಿ ! ಈ ಕುದುರೆಯ ತೇಜಸ್ಸನ್ನೂ ಶಕ್ತಿಯನ್ನೂ ನೋಡಿ ಇದರ ಮೇಲೆ ಹತ್ತುವದಕ್ಕೆ ನನಗೆ ಸಂಶಯ ಬರುತ್ತದೆ ಯಾವನಾದರೂ ಗಂಧರ್ವ ಪುರುಷನು ಋಷಿಗಳ ಶಾಪದಿಂದ ಕುದುರೆಯಾಗಿ ಹುಟ್ಟಿದ್ದಾನೋ ಏನೋ? ಸಾಧಾರಣ ಕುದುರೆಗಳಿಗೆ ಇಂಥ ಅಲೌಕಿಕ ಲಕ್ಷಣಗಳು ಇರುವದಿಲ್ಲ. ಮುನಿಗಳ ಶಾಪದಿಂದ ದೇವತೆಗಳು ತಮ್ಮ ದಿವ್ಯಕಾಯವನ್ನು ಬಿಟ್ಟು ಪಶ್ವಾದಿಗಳ ಕಾಯವನ್ನು ಕೈಕೊಳ್ಳುತ್ತಾರೆ. ಪೂರ್ವದಲ್ಲಿ **ಸ್ಥೂಲಸಿರ** ಎಂಬ ಮಹಾತಪಸ್ವಿಯ ಶಾಪದಿಂದ **ರಂಭೆ** ಎಂಬ ಅಪ್ಸರಾಂಗನೆಯು ಸ್ವರ್ಗ ಬಿಟ್ಟು ಇಹ ಲೋಕದಲ್ಲಿ **ಅಶ್ವಿನೀ** ರೂಪವನ್ನು ತಾಳಿ ಮೃತ್ತಿಕಾವತೀ ನಗರದೊಳಗೆ ಹುಟ್ಟಿ, **ಶತಧನ್ವ** ರಾಜನ ಸೇವೆಯಲ್ಲಿ ಬಹುಕಾಲ ಇದ್ದಳು. ಮತ್ತು ಹಲಕೆಲವು ದೇವತೆಗಳು ಶಾಪಮೂಲಕವಾಗಿ ಬೇರೆ ಬೇರೆ ರೂಪಗಳನ್ನು ತಾಳಿ ಭೂಮಿಯ ಮೇಲೆ ವಾಸಮಾಡುತ್ತಿದ್ದಾರೆಂಬದಾಗಿ ಪುರಾಣಾಂತರ ಕಥೆಗಳುಂಟು. ಇದಾದರೂ ಶಾಪದ ಫಲವನ್ನು ಭೋಗಿಸುವಂತೆ ನನಗೆ ತಿಳಿಯಬರುತ್ತದೆ" ಎಂದು ಎದ್ದು ಮೇಲೆ ಹತ್ತಬೇಕೆಂಬ ಇಚ್ಛೆಯಿಂದ ಹತ್ತರ ಹೋಗಿ "ಮಹಾತ್ಮನೆ, ನೀನು ಯಾವಾತನಿದ್ದೀಯೋ ಇರು, ನಿನ್ನ ಮೇಲೆ ಆರೋಹಣ ಮಾಡುತ್ತೇನೆ; ನನ್ನ ತಪ್ಪು ಕ್ಷಮಿಸು"

ಎಂದು ಪುನಃ ಮನದೊಳಗೆ ಅಂದನು. ಆತನ ಅಭಿಪ್ರಾಯ ತಿಳಿದು ಆರೋಹಣ ಮಾಡುವದಕ್ಕೆ ಆತನನ್ನು ಕರೆಯುತ್ತದೋ ಏನೋ ಅನ್ನುವಂತೆ ಇಂದ್ರಾಯುಧವು ತನ್ನ ಗೋಣು ಅಲ್ಲಾಡಿಸಿ, ಓರೆಗಣ್ಣಿನ ಸೂಕ್ಷ್ಮ ದೃಷ್ಟಿಯಿಂದ ನೋಡಿ, ಬಲಗಾಲಿನಿಂದ ನೆಲ ಕೆದರಿ ಹೇಕರಿಸಿತು. ಅದನ್ನು ಆರೋಹಿಸಿ, ಚಂದ್ರಾಪೀಡನು ಹೊರಟು ಹೊರಗೆ ಬಂದಕೂಡಲೆ ದರ್ಶನಕ್ಕೆ ಬಂದ ರಾಜಪುತ್ರರು, ನಾಮುಂಚೆ ನೀಮುಂಚೆ ಎಂದು ಮುಂದುವರಿದು ಬರಲು, **ಬಲಾಹಕನು** ಅವರೆಲ್ಲರ ಹೆಸರುಗಳನ್ನು ಕ್ರಮದಿಂದ ಬೇರೆ ಬೇರೆ ವಿವರಿಸಿದ ಬಳಿಕ, ಚಂದ್ರಾಪೀಡನು ಆದರದಿಂದ ಅವರವರ ಭೆಟ್ಟಿಯು ತಕ್ಕೊಂಡು ತಕ್ಕ ಸನ್ಮಾನ ಮಾಡಿ ಆ ರಾಜಪುತ್ರರನ್ನೊಡಗೊಂಡು, ವೈಶಂಪಾಯನನ್ನು ಕರಕೊಂಡು ಆ ಚತುರಂಗ ಸೇನೆಯೊಡನೆ ವಂದಿ ಮಾಗಧರ ಸ್ತುತಿಪಾಠಗಳ ಉಗ್ಗಡಣೆಯಿಂದ ಊರಿಗೆ ಬಂದನು. ಇತ್ತ ಊರೊಳಗಿನ ಜನರೆಲ್ಲರು ತಮ್ಮ ತಮ್ಮ ಕೆಲಸಗಳನ್ನು ಬಿಟ್ಟು ಚಂದ್ರಾಪೀಡನನ್ನು ನೋಡಬೇಕೆಂಬ ಆಕಾಂಕ್ಷೆಯಿಂದ ಹಲವರು ಮಾಳಿಗೆ ಏರಿ, ಹಲವರು ಮೇಲುಪ್ಪರಿಗೆ ಹತ್ತಿ, ಕೆಲವರು ಕಿಡಿಕಿಯೊಳಗೆ, ಹಲವರು ಬಾಗಿಲುಗಳೊಳಗೆ, ಹಲವರು ಬಾಗಿಲ ಮುಂದಿನ ಕಟ್ಟೆಗಳ ಮೇಲೆ ಉತ್ಸಾಹದಿಂದ ನಿಂತು ನೋಡುತ್ತಿದ್ದರು. ಪಟ್ಟಣದೊಳಗಿದ್ದ ರಾಜಬೀದಿಗಳು ಬಹು ಅಗಲವಾಗಿದ್ದರೂ ಅಲ್ಲಿ ಕಾಲು ಇಡಲಿಕ್ಕೆ ಅನುವಿಲ್ಲದಷ್ಟು ದಟ್ಟಣೆಯಾಗಿತ್ತು.

ಚಂದ್ರಾಪೀಡನನ್ನು ನೋಡಿ ಆ ಪಟ್ಟಣದ ಜನರೆಲ್ಲರು– "ಇಂದಿಗೆ ನಮ್ಮ ಪುಣ್ಯವು ಫಲಿಸಿತು ! ಈ ಹೊತ್ತಿಗೆ ನಮ್ಮ ಕಣ್ಣುಗಳು ತೃಪ್ತವಾದವು. ಈ ದೊರೆಯನ್ನು ನೋಡಿ ನಾವು ಧನ್ಯರಾದೆವು !" ಎಂದು ಸಂತೋಷದಿಂದ ನಿಂತನಿಂತಲ್ಲಿಯೇ ಆತನಿಗೆ ಕೈಮುಗಿದರು. ನಗರದೊಳಗಿನ ಸ್ತ್ರೀಯರಂತೂ **ಚಂದ್ರಾಪೀಡನು** ವಿದ್ಯಾಮಂದಿರದಿಂದ ಬಂದನೆಂಬ ಸುದ್ದಿಯು ಕೇಳಿದ

ಕೂಡಲೆ ಕೈಯೊಳಗಿನ ಕೆಲಸವರ್ಧಕ್ಕೈಯೊಳಗೆ, ಕುಂಕುಮ ಹಚ್ಚಿ ಕೊಳ್ಳುವದಕ್ಕೆ ಎಡಗೈಯೊಳಗೆ ಹಿಡಿದ ಕನ್ನಡಿಯನ್ನೂ ಬಲ ಗೈಯೊಳಗಿನ ಕುಂಕುಮದ ಕರಡಿಗೆಯನ್ನೂ ಹಾಗೇ ಹಿಡಕೊಂಡು ಹಲವು ಸ್ತ್ರೀಯರು ನೋಡುವ ಅವಸರದಿಂದ ಹೊರಬಿದ್ದರು ಕಾಲಿಗೆ ಹಚ್ಚಿದ ಅಲತಿಗೆಯ ರಸವು ಇನ್ನೂ ಆರಿದ್ದಿಲ್ಲ; ಅಷ್ಟ ರೊಳಗೆ ನೋಡುವ ಲವಲವಿಕೆಯಿಂದ ಹಲವು ತರುಣಿಯರು ಒಳ ಗಿಂದ ಓಡುತ್ತ ಹೊರಗೆ ಬಂದರು; ಕೊರಳೊಳಗೆ ಹಾಕಿಕೊಳ್ಳ ಬೇಕೆಂದು ಹಿಡಿದ ಏಕಾವಳೀ ಸರಗಳು ಹಾಗೇ ಅವರ ಕೈಯೊಳಗೆ ಜೋತಾಡುತ್ತಿರುವವು;ಬಾಲೆಯರು ಹಾಲುಕುಡಿಯುವದಕ್ಕೆ ಬಾಯಿ ಹಚ್ಚಿದ ಚಿನ್ನದ ಬಟ್ಟಲಗಳನ್ನು ಅಲ್ಲಿಂದಲ್ಲಿಯೇ ಬಿಟ್ಟು ನೋಡುವ ತವಕದಿಂದ ಓಡಿ ಬಂದರು; ಅವಸರದಿಂದ ಮೇಲು ಪ್ಪರಿಗೆ ಏರುವಾಗ ಹಲವು ನಿತಂಬಿನಿಯರ ನಡುವಿನ ಪಟ್ಟಿಗಳು ಸಡಲಿ ಬಿದ್ದವು; ಹಲವರ ಕೊರಳೊಳಗಿನ ಹಾರಗಳು ಹರಿದು ಮುತ್ತುಗಳುದುರಿದವು; ಎಲ್ಲಿ ನೋಡಿದರೂ ಸ್ತ್ರೀಯರ ಕೈಕಾಲು ಗಳೊಳಗಿನ ಕಂಕಣ ಪೈಜಣಗಳ ಝಣತ್ಕಾರದ ಧ್ವನಿಯೇ ಕಿವಿಗೆ ಬೀಳುತ್ತಿರುವದು ಈ ಮೇರೆಗೆ ಆ ನಗರದೊಳಗಿನ ಸ್ತ್ರೀಯರು ಸೌಧಗೃಹಗಳ ಮೇಲೆ ಹತ್ತಿ ಚಂದ್ರಾಪೀಡನನ್ನು ನೋಡುವಾಗ ಉಂಟಾದ ಅಪ್ರತಿಮ ಶೋಭೆಯನ್ನು ಎಷ್ಟು ಬಣ್ಣಿಸಿದರೂ ತೀರದು; ಆ ಸ್ತ್ರೀಯರಲ್ಲಿ ಒಬ್ಬರಿಗೊಬ್ಬರು—**ಚಂದ್ರಾಪೀಡನ** ಮೇಲೆ ಚಲ್ಲವರಿವ ಚೆಲುವ ಬಿಳಿಯ ಚಾಮ ರಗಳೊಳಗೆ ಮೋರೆ ಎಷ್ಟು ಚಂದ ಕಾಣಿಸುತ್ತದೆ, ನೋಡಿರೇ ! ಅದು ನೋಡು ! ಆತನ ಮುಂಡಾಸದ ಮೇಲಿನ ಮುತ್ತಿನ ತುರಾಯಿ ಎಷ್ಟು ಮನೋಹರವಾಗಿ ತೋರುತ್ತದೆ ! ನೋಡು, ನೋಡು ! ವೈಶಂಪಾಯನನ ಕೂಡ ಮಾತಾಡುವಾಗ ಆತನ ಮುದ್ದು ಮುಖದ ಮುಗುಳ್ನಗೆಯು ನೋಡ-ವವರ ಮನಸ್ಸನ್ನು ಎಷ್ಟು ಸೊಗಸುಗೊಳಿಸುತ್ತದೆ; ಇಂಥ ಸೌಂದರ್ಯವೂ ಐಶ್ವ

ರ್ಯವೂ ಜಗದೀಶ್ವರನ ಕೃಪೆಯಿಂದ ಈತನಿಗೆ ಪ್ರಾಪ್ತವಾದವಲ್ಲದೆ ಕಂಡವರಿಗೆ ಬರುವವೇ? ಈ ಪುರುಷನನ್ನು ಪತಿಯಾಗಿ ವರಿಸುವ ಪುಣ್ಯವಂತಳು ಯಾವಾಕೆ ಇದ್ದಾಳೋ ತಿಳಿಯದು; ಆಕೆಯೇ ಲೋಕದೊಳಗೆ ಧನ್ಯಳು! ಅವಳ ಸುಕೃತಕ್ಕೆ ಸರಿ ಇಲ್ಲ, ಇಂಥ ಪುತ್ರರತ್ನವನ್ನು ಹೆತ್ತ ನಮ್ಮ ವಿಲಾಸವತೀ ರಾಣಿಯವರ ಪುಣ್ಯಕ್ಕೆ ಎಣೆಯೇ" ಎಂದು ಮಾತಾಡುತ್ತಿರುವರು. ಅಷ್ಟರೊಳಗೆ ಸರ್ವರಿಗೂ ದರ್ಶನದಿಂದ ಆನಂದ ಕೊಡುತ್ತ ಚಂದ್ರಾಪೀಡನು ರಾಜಮಂದಿರದಿಂದ ಮಹಾದ್ವಾರದ ಮುಂದೆ ಬಂದು ಕುದುರೆಯಿಳಿದು, ವೈಶಂಪಾಯನನ ಕೈಹಿಡಿದು, ಮುಂದೆ ಬಲಾಹಕನು ಮಾರ್ಗ ತೋರಿಸುತ್ತಾನೆ, ಚೋಪದಾರರು "ಪರಾಕ" ಎಂದು ಎಚ್ಚರಗೊಳಿಸುತ್ತಾರೆ; ವಂದಿಗಳೂ ಭಟ್ಟಂಗಿಗಳೂ ಹೊಗಳುತ್ತಾರೆ, ರೈತರೂ ರಾಹುತರೂ ಮುಜುರೆ ಕೊಡುತ್ತಾರೆ ಹೆಜ್ಜೆ ಹೆಜ್ಜೆಗೆ ವೃದ್ಧನಾರಿಯರು ಅಂತಃಪುರದೊಳಗಿಂದ ಬಂದು ಆರತಿ ಮಾಡಿ ನಿವಾಳಿಯ ಚೆಲ್ಲುತ್ತಾರೆ; ಸಂಗಡ ಶೂರರಾದ ಪ್ರತಿಷ್ಠಿತ ಮುಕುಟವರ್ಧನರು ವಿನಯದಿಂದ ಬರುತ್ತಾರೆ; ಈ ಮೇರೆಗೆ ಚಂದ್ರಾಪೀಡನು ಬಂದು ಸರದಾರರ ಸಮೂಹದೊಡನೆ ಕುಳಿತುಕೊಂಡ ತಂದೆಯನ್ನು ನೋಡಿ ದೂರದಿಂದಲೇ ತಲೆವಾಗಿ ನೆಲಮುಟ್ಟಿ ವಂದನೆ ಮಾಡಿದನು.

— ಗ ಮ. ತೂರಮರಿ

---

## ಪರಿಚಯ

ಕೈ. ವಾ. **ಗಂಗಾಧರ ಮಡಿವಾಳೇಶ್ವರ ತುರಮರಿ** ಯವರು ಉಭಯಭಾಷಾವಿಶಾರದರು ಕನ್ನಡದಲ್ಲಿ ಸವಿಕಟ್ಟು ಗ್ರಂಥಗಳನ್ನು ಬರೆದ ಹಿರಿಯರಲ್ಲಿ ಇವರೊಬ್ಬರು ಸಂಸ್ಕೃತದಲ್ಲಿದ್ದ ಬಾಣಭಟ್ಟನ ಕಾದಂಬರಿಯನ್ನು ಕನ್ನಡಕ್ಕೆ ಅನುವಾದ ಮಾಡಿ, ಕನ್ನಡಿಗರಿಗೆ ಕವಿಶ್ರೇಷ್ಠ ಬಾಣನ ಪರಿಚಯವನ್ನು ಚೆನ್ನಾಗಿ ಮಾಡಿಕೊಟ್ಟಿದ್ದಾರೆ. ಈ ಗ್ರಂಥವನ್ನು ಓದುವಾಗ-ಮೂಲಗ್ರಂಥ ವನ್ನು ಓದಿದಷ್ಟೇ ಆನಂದವಾಗುತ್ತದೆ ಈ ರೀತಿ ಅವರು ಕನ್ನ ಡಕ್ಕೆ ಮಾಡಿದ ಸೇವೆಯು ಚಿರಸ್ಮರಣೀಯವಾಗಿದೆ. ಇವರು ಮತ್ತೆ ಹಲವು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಶಬ್ದ- ಮಂಜರಿ' ಮುಖ್ಯವಾದುದು. ಇವರು ೧೮೭೭ ರಲ್ಲಿ ಕೈಲಾಸ ವಾಸಿಗಳಾದರು.

**ಅಭ್ಯಾಸಃ—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ.**

(೧) **ಇಂದ್ರಾಯುಧದ** ಲಕ್ಷಣಗಳು ಎಂಥವು ? **ಇಂದ್ರಾಯುಧ** ವನ್ನು ನೋಡಿ **ಚಂದ್ರಾಪೀಡನ** ಮನಸ್ಸಿನಲ್ಲಿ ಯಾವ ವಿಚಾರಗಳು ಬಂದವು ?

(೨) ಚಂದ್ರಾಪೀಡನು ರಾಜಬೀದಿಯಲ್ಲಿ ನಡೆದಾಗ್ಗೆ ಆತನನ್ನು ನೋಡಲು ನಗರದೊಳಗಿನ ಸ್ತ್ರೀಯರು ತೋರಿಸಿದ ಉತ್ಸಾಹ ಮತ್ತು ಸಂಭ್ರಮಗಳನ್ನು ವಿಸ್ತಾರವಾಗಿ ವರ್ಣಿಸಿರಿ.

(೩) ಸ್ತ್ರೀಯರು ಚಂದ್ರಾಪೀಡನ ಚೆಲುವಿಕೆಯನ್ನೂ ಆಕರ್ಷಕತೆ ಯನ್ನೂ ಹೇಗೆ ವರ್ಣಿಸಿದ್ದಾರೆ ?

(೪) ನೀವು ನೋಡಿದ ಮೆರವಣಿಗೆಯ ವರ್ಣನೆಯನ್ನು ೩೦ ಸಾಲು ಗಳಿಗೆ ಮಿಕ್ಕದಷ್ಟು ಬರೆಯಿರಿ.

## ವ್ಯಾಕರಣ:—

### (ಅ) ವಾಕ್ಯಪಲ್ಲಟ:—

ಸಜ್ಜನರು ಸಾವಿಗಂಜುವದಿಲ್ಲ. ( ನಿಶ್ಚಯಾರ್ಥಕ ವಾಕ್ಯ )
ಸಜ್ಜನರು ಸಾವಿಗಂಜುವರೆ ? (ಪ್ರಶ್ನಾರ್ಥಕ.)

**ಇದರಂತೆ ನಿಶ್ಚಯಾರ್ಥಕ, ಪ್ರಶ್ನಾರ್ಥಕ ವಾಕ್ಯಗಳ ಪಲ್ಲಟಮಾಡಿರಿ:—**

(೧) ಮುನಿಗಳ ಶಾಪದಿಂದ ದೇವತೆಗಳು ತಮ್ಮ ದಿವ್ಯ ಕಾಯುವನ್ನು ಬಿಟ್ಟು ಪಶ್ವಾದಿಗಳ ಕಾಯುವನ್ನು ಕೈಕೊಳ್ಳುತ್ತಾರೆ.

(೨) ಮಗುವನ್ನು ನೋಡಿ ಯಾವ ತಾಯಿಗೆ ಆನಂದವಾಗುವದಿಲ್ಲ ?

(೩) ಇಂಥ ಪುತ್ರರತ್ನವನ್ನು ಹೆತ್ತ ನಮ್ಮ ವಿಲಾಸವತೀ ರಾಣಿಯರ ಪುಣ್ಯಕ್ಕೆ ಎಣೆಯೇ ?

(೪) ಜಾತಿಹೀನರ ಮನೆಯು ಜ್ಯೋತಿ ತಾ ಹೀನವಿರುವದಿಲ್ಲ.

### (ಆ) ವಾಕ್ಯವಿಭಜನೆ:—

ಜೀಯಾ, ನೀವು ಸಕಲ ವಿದ್ಯೆಗಳಲ್ಲಿ ಪ್ರವೀಣರಾದದ್ದನ್ನು ಕಂಡು, ಅರಸರು ಇಂದಿಗೆ ತಮ್ಮ ಮನೋರಥವು ಪೂರ್ಣವಾಯಿತೆಂದು ಬಗೆದು, ನಿಮ್ಮನ್ನು ರಾಜಮಂದಿರಕ್ಕೆ ಕರಕೊಂಡು ಬರಬೇಕೆಂದು ನನ್ನನ್ನು ಕಳಿಸಿದಾರೆ .

(ಇ) ಕುದುರೆ **ಹೇಕರಿಸುತ್ತದೆ**. ಇದರಂತೆ ಆಯಾ ಪ್ರಾಣಿಗಳ ಧ್ವನಿಸೂಚಕ ಶಬ್ದಗಳನ್ನು ಹೇಳಿರಿ – **ಕೋಗಿಲೆ, ನರಿ, ಶುಕ, ಆನೆ.**

# ೪. ತಾಯಿ ಕಂಡ ಕನಸು

ತಾಯಿ ರೊಟ್ಟಿ ಬಡೆಯುತ್ತಿದ್ದರು. ಅವರ ಬಳಿಯಲ್ಲಿ ಕುಳಿತುಕೊಂಡು ರೊಟ್ಟಿ ತಿನ್ನುತ್ತಿದ್ದೆ. ಬಾಯಿಗೆ ಒಂದು ತುತ್ತು ಇಡುತ್ತ ಆ ಮಾತು ಈ ಮಾತು ಎತ್ತುತ್ತಿದ್ದೆ. ನನ್ನ ಮಾತು ಮುಗಿಯುವತನಕ ತಾಯಿ ಮೌನವಾಗಿಯೇ ಇದ್ದರು. ಅವರೇನೋ ಹೇಳಬೇಕೆಂದು ಮಾಡಿದ್ದರೆಂದು ತೋರಿತು. ಆದರೂ ವಿಚಾರ ಒಳಗೊಳಗೇ ಬೇಗುದಿಗಿಟ್ಟುಕೊಂಡಿದ್ದವು. ನಾನು ಕೇಳಿಯೆ ಬಿಟ್ಟೆ

'ಏನದು ತಾಯಿ ? ಏನೋ ಹೇಳಬೇಕೆನ್ನುತ್ತೀಯಲ್ಲ ?'

'ಏನಿಲ್ಲಪ್ಪ. ನಿನ್ನೆ ರಾತ್ರಿ ಒಂದು ಕನಸು ಬಿದ್ದಿತ್ತು."

'ಹಾಂ' 'ಅದೇ ಸರಿ. ದಿನವೂ ಒಂದು ಕನಸು.'

'ಇಲ್ಲಪ್ಪ ನನ್ನ ಕನಸು ಸುಳ್ಳಾಗುವದಿಲ್ಲ.'

'ಸರಿ ಹೇಗೆ ಸುಳ್ಳಾದೀತು ನಿಮ್ಮ ಕನಸು ? ಕೇಳಿದವರಿಗೆಲ್ಲ ಹುಚ್ಚು ಹಿಡಿದು ಬಿಡುವದೇ ನಿಜ."

'ಹಾಗೆನ್ನಬೇಡ, ತಮ್ಮ ! ನನಗೆ ಕನಸಿನಲ್ಲಿ ನಂಬಿಗೆ ಇದೆ.'

'ಏನದು ಹೇಳಿ ಬಿಡು ಅವ್ವ'.

'ಹೇಳಲೇ ಬೇಡವೊ ಅದನ್ನೆ ಚಿಂತೆ ಮಾಡುತ್ತಿದ್ದೆ. ಆದರೂ ಹೇಳಿಯೆ ಬಿಡುತ್ತೇನೆ. ಕೇಳು ಕೋಳಿ ಕೂಗಲು ಆಗಲೇ ಸುರುವು ಮಾಡಿದ್ದವು ಆಳುಮಗ ಬಂದು ದನುಕರುಗಳಿಗೆ ಇನ್ನೂ ಮೇವು ಹಾಕಿರಲಿಲ್ಲ. ಆಗೊಂದು ಕನಸು ಬಿತ್ತು. ಆ ಹೊತ್ತಿನಲ್ಲಿ ಬಿದ್ದ ಕನಸು ಎಂದೂ ಹುಸಿ ಹೋಗುವದಿಲ್ಲ.' ತಾಯಿ ಇಷ್ಟನ್ನು ಹೇಳುತ್ತಲೇ ಕಣ್ಣೀರು ಹಾಕತೊಡಗಿದರು.

ಆಗ ಉಪ್ಪು ನೀರು ಅಡುಗೆಯೊಡನೆ ಬೆರೆತುಹೋಯಿತು 'ಬಾಳುವೆಯಲ್ಲ ಉಪ್ಪು ನೀರು' ಎಂದು ಒಲೆ ಕೂಗಿತು ಗಂಟಲಲ್ಲಿದ್ದ ತುತ್ತು ನಂಜಾಗಿ ತೋರಿತು ನನಗೆ. ಸ್ವಲ್ಪ ನೀರು ಕುಡಿದು ತಾಯಿಗೆ ಹೇಳಿದೆ.

'ಅದೇನೆ ಇರಲಿ. ಮುಗಿಸಿಬಿಡು ತಾಯಿ, ಹೇಳೋದನ್ನ.' ಈ ನನ್ನ ಮಾತಿಗೆ ಅವರು ಒಪ್ಪಿಕೊಂಡು ಹೇಳತೊಡಗಿದರು.

'ಗಂಟೆ ಅಯ್ಯಪ್ಪನೊಬ್ಬ ಬಾಗಿಲಲ್ಲಿ ಬಂದು ಕೂಗಾಡ ಹತ್ತಿದನು. ಗಂಭೀರವಾಗಿತ್ತು ಅವನ ಮುಖಮುದ್ರೆ. ಅವನು ಅಕರಾಳವಿಕರಾಳವಾಗಿ ತೋರುತ್ತಿದ್ದ. ಎಡಗೈಯಲ್ಲಿ ಕೆಂಪು ಬಟ್ಟೆಯ ಜೋಳಿಗೆ, ಬಲಗೈಯಲ್ಲಿ ಅಂಕುಶ, ಹಣೆಯ ಮೇಲೆ ಭಸ್ಮ, ನಡುವೆ ಒಂದು ಚಂದ್ರನ ಬಟ್ಟು, ಗಂಟೆ ಬಾರಿಸುತ್ತ ಅಂಕುಶವನ್ನು ನೆಲಕ್ಕೆ ಅಪ್ಪಳಿಸುತ್ತ ರೂಪಾಯಿ ಕೊಡುತ್ತೀರೋ ಇಲ್ಲವೆ ಶಾಪ ಕೊಡಲೋ ಎಂದು ಒದರಹತ್ತಿದನು. ಅವರ ಹತ್ತಿರ ಚಿಲ್ಲರು ಹಣವಿರಲಿಲ್ಲ ನನ್ನ ಹತ್ತಿರವೂ ಇರಲಿಲ್ಲ. 'ಸ್ವಾಮೀ ಚಿಲ್ಲರಿಲ್ಲ' ಎಂದು ಅವರು ಹೇಳಿದರು; ನಾನೂ ಹೇಳಿದೆ. ಅವನು ಸಿಕ್ಕಾಪಟ್ಟೆ ಚೀರಾಡಿದ. ಕೊಡದಿದ್ದರೆ ಹಾನಿಯಾಗುವಂತೆ ಮಾಡುತ್ತೇನೆ' ಎಂದ. ನಾವು ಕೈಕಾಲು ಬಿಟ್ಟೆವು 'ಸ್ವಾಮಿ' ಮತ್ತೇನು ಬೇಕಾದರೆ ಕೇಳಿ. ಕಾಳು ಕೊಡುತ್ತೇನೆ. ಬಿಡಿಕಾಸು ಇಲ್ಲ' ಎಂದು ಕೇಳಿಕೊಂಡೆವು ಆತನಿಗೆ ಸೈರಣೆ ಹುಟ್ಟಲಿಲ್ಲ. ಕುಣಿಯಹತ್ತಿದ.'

'ಮುಂದೇನು ಆಯಿತು ಹೇಳು ಅವ್ವ'

"ಆತ ಕಣ್ಣು ಕೆಂಪಗೆ ಮಾಡಿ ಕೇಳಿದ; ರೂಪಾಯಿ ಕೊಡುವದಾಗುವದಿಲ್ಲವೇ? ಹೋಗಲಿ ನಿಮ್ಮ ಹುಡುಗನ ಮೈಮೇಲಿನ ಬಟ್ಟೆ ಬಿಚ್ಚಿಸಿಕೊಡಿರಿ' ಎಂದ. ನಾನು ಅವರಿಗೆ ಕೊಡಕೂಡದೆಂದೆ. ಆದರೂ ಕೇಳಲಿಲ್ಲ. ಶಿವನ ಮೈಮೇಲಿನ ಅರಿವೆಗಳನ್ನು

ಬಿಡಿಸಿಕೊಟ್ಟರು. ಅಯ್ಯಪ್ಪ ನಗುತ್ತ ಹೋದ. ಅರಿವೆ ಕೊಡ ಬಾರದಪ್ಪ, ಕೊಡಬಾರದು. ಏನು ಆಗುತ್ತದೆಯೊ..........”

‘ಹೌದೇ, ಕಣ್ಣೀರು ಹಾಕಬೇಡಿರೆಂದು ಎಷ್ಟು ಸಾರೆ ಹೇಳಿಲ್ಲ? ನನ್ನ ಮೈಯೆಲ್ಲ ತಂಪಾಗಿ ಹೋಗುತ್ತದೆ ಅಳುವದನ್ನು ಕಂಡು.’

‘ಮತ್ತೇನು ಮಾಡಲೆಪ್ಪ ಇನ್ನೂ ಏನು ಕಾದು ಕುಂತದೊ!’

‘ಏನು ಆಗೋದು ಆಗುತ್ತದೆ. ನಮಗೆ ಬೇರೆ ಕಷ್ಟ ಕಾದು ಕುಂತಿಲ್ಲವಷ್ಟೆ!’

ನಾನು ಇಷ್ಟು ಮಾತನಾಡುವಾಗಲೇ ಊರಿಗೆ ಹೋಗಿದ್ದ ತಮ್ಮ ಬಾಗಿಲಲ್ಲಿ ಬಂದು ‘ಒಳಗೆ ಯಾರಿದ್ದೀರಿ? ಅವ್ವಾ ಕಾಲಿಗೆ ನೀರು ತಾ!’ ಎಂದು ಕೂಗಿದ. ತಾಯಿ ರೊಟ್ಟಿ ಬಡಿಯುವದನ್ನು ನಿಲ್ಲಿಸಿ ಶಿವನಿಗೆ ನೀರು ಕೊಟ್ಟರು. ನಾನು, ಶಿವನು– ಇಬ್ಬರೂ ತಾಯಿ ಮಾಡಿಕೊಟ್ಟ ರೊಟ್ಟಿಯನ್ನು ತಿಂದು ಅಡುಗೆ ಮನೆಯಿಂದ ಹೊರಬಿದ್ದೆವು, ಆಗ ನನಗೆ ತಾಯಿ ನಿಟ್ಟುಸಿರು ಬಿಟ್ಟುದು ಕೇಳಿಸಿತು.

† † † † † †

ತಾಯಿ ಕನಸು ಕಂಡ ಮೇಲೆ ನಾನು ಮುಂದಿನ ದಿನಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದೆ. ಕೆಟ್ಟ ಲಕ್ಷಣಗಳೊಂದೂ ನನಗೆ ತೋರಲಿಲ್ಲ. ಸಂಜೆ ಮುಂಜಾವಿನಲ್ಲಿ ವಾಯು ವಿಹಾರಕ್ಕೆ ಹೊರಟಾಗ ಇದೇ ವಿಚಾರ. ಭಾವಿಕತನದಲ್ಲಿ ನಂಬುಗೆ ಇಡಬೇಕೆ? ಕನಸು ಜೀವನ ವ್ಯಾಪಾರದ ಕ್ರಯಪಟ್ಟಿಯೆ? ಈ ವಿಷಯದ ಮೇಲಿದ್ದ ಪುಸ್ತಕಗಳನ್ನು ಕೊಂಡು ಓದಿದೆ ಕೆಲ ಉತ್ತರಗಳು ನನ್ನ ಪ್ರಶ್ನೆಗೆ ಪರವಾಗಿಯೂ, ಕೆಲವು ವಿರುದ್ಧವಾಗಿಯೂ ತೋರಿದವು.

ಒಂದು ಸಂಜೆ ಈ ವಿಚಾರ ಮಾಡುತ್ತ ಮನೆಗೆ ಬಂದೆ ಇನ್ನೂ ದೀಪ ಹಚ್ಚಿರಲಿಲ್ಲ. ಮನೆಯಲ್ಲಿ ಕತ್ತಲು ಕವಿದಿತ್ತು. ತಾಯಿಯನ್ನು ಕೂಗಿದೆ. ಉತ್ತರ ಬರಲಿಲ್ಲ ‘ಮನೆಯನ್ನು ಬಿಟ್ಟು

ಎಲ್ಲರೂ ಎಲ್ಲಿ ಹೋಗಿದ್ದಾರೋ ? ದೀಪವನ್ನು ಹಚ್ಚಬಾರದೇ' ಹೀಗೆ ನುಡಿದುಕೊಳ್ಳುತ್ತ ಅಡುಗೆಯ ಮನೆಯ ಕಡೆಗೆ ನಡೆದೆ. ಒಲೆಯ ಮುಂದೆ ದೀವಿಗೆಯನ್ನು ಇಟ್ಟುಕೊಂಡು ತಾಯಿ ವಿಚಾರದಲ್ಲಿ ಕರಗಿ ಹೋದುದನ್ನು ಕಂಡೆ! ಆ ಸನ್ನಿವೇಶ ಎದೆಯನ್ನು ಇರಿದಂತಾಯಿತು. ಆಗ ತಾನೆ ಹಸನುಗೊಳಿಸಿದ ನೆಲದ ಮೇಲೆ ಅಕ್ಕಿಯ ಗುಂಪು ಇಟ್ಟಿದ್ದಾರೆ. ಒಂದು ಅಕ್ಕಿಯ ಗುಂಪಿನ ಮೇಲೆ ಬೂದಿ. ಇನ್ನೊಂದರ ಮೇಲೆ ಊದಿನಕಡ್ಡಿ ಇದೇನು ಎನ್ನುತ್ತ ಹೋಗಿ ಅವರ ಮುಂದೆ ನಿಲ್ಲುವಷ್ಟರಲ್ಲಿ ತಾಯಿ ಹಣೆ ಬಡಿದುಕೊಳ್ಳಹತ್ತಿದರು. 'ನೊಣ ಬೂದಿಯನ್ನು ಮುಟ್ಟಿತಪ್ಪ ಶಿವನಿಗೆ ಜ್ವರ ಬಂದಿವೆ. ಉಳಿಯುವದಿಲ್ಲ ಅಯ್ಯೋ.. ....ಶಿವನೆ ......?"

'ಛೆ, ಏನು ಬೇಕಾದರೂ ಆಗಲಿ. ನಾನು ಮಾತ್ರ ಇದನ್ನೆಲ್ಲ ನೋಡಲಾರೆ' ಎಂದುಕೊಂಡು ಅಲ್ಲಿಂದ ಹೊರಬಿದ್ದು, ಹೊರಬಾಗಿಲ ಕಡೆಗೆ ಬಂದೆ. ನನ್ನ ಕಣ್ಣು ನಾನೇ ಮುಟ್ಟಿಕೊಂಡು ನೋಡಿದೆ. ಕಣ್ಣಲ್ಲಿ ಕತ್ತಲು ಕುಣಿಯುತ್ತಿತ್ತು. ಹೊರಗೆ ಬೆಳದಿಂಗಳು ಹಬ್ಬಿದ್ದರೂ ಕಾರ್ಗತ್ತಲೆಯು ಕುಡಿಯಿಟ್ಟಂತೆ ನನ್ನ ಮನದ ಮೇಲೆ ಪರಿಣಾಮವಾಯಿತು. 'ಶಿವನಿಗೆ ಜ್ವರ ಬಂದಿವೆಯೆಂದು ತಾಯಿ ಹೇಳಿದರಲ್ಲ !' ಎಂದು ನನಗೆ ನಾನೆ ನುಡಿದು ಹೊರಗಿನ ಖೋಲಿಯಲ್ಲಿ ಹೋಗಿ ನೋಡಿದೆ. ಖೋಲಿಯ ತುಂಬ ಕತ್ತಲು ಶಿವನು ಕಣ್ಣಿಗೆ ಕಾಣಿಸಲಿಲ್ಲ. ಕಾಲು ಸವರುತ್ತ ಖೋಲಿಯ ತುಂಬ ತಿರುಗಾಡಿದೆ. ಶಿವನು ಕಾಲುಮುಡಿಚಿಕೊಂಡು ಮಲಗಿದ್ದ. ಮೈಮೇಲೆ ಹೊದೆದುಕೊಂಡಿದ್ದ ಶಾಲನ್ನು ಸರಿಸಿ ಮೈ ಮುಟ್ಟಿ ನೋಡಿದೆ. ಅಯ್ಯೋ........! ಮೈ ನಿಗಿನಿಗಿ ಬೆಂಕಿ!

ಶಿವನ ಬೇನೆ ಕಣ್ಣು ಮುಚ್ಚಾಟವಾಡಿಸಿತು ಒಂದು ದಿನ ಇಳಿ ಹೊತ್ತಿನಲ್ಲಿ ಆತ ಮಲಗಿದ ತಾಣದಲ್ಲಿ ಯಾರೂ ಇಲ್ಲದುದನ್ನು ಕಂಡು ಆತನ ಹತ್ತಿರ ಹೋಗಿ ಮಾತನಾಡಿಸಿದೆ. ತಮ್ಮ

ತುಂಬಿದ ಹೃದಯದಿಂದ ಮಾತನಾಡಿದ. 'ಶಿವನು ಷಷ್ಟು ನಿಚ್ಚಳ ವಾಗಿದ್ದಾನಪ್ಪ' ಎಂದು ನನಗೆ ಆನಂದವಾಯಿತು. ಮರುಕ್ಷಣವೇ ಆತನ ತಲೆಯ ಮೇಲೆ ಕಟ್ಟಿದ್ದ ಒದ್ದೆಯಾದ ಅರಿವೆಯನ್ನು ನೋಡಿ ಕಣ್ಣಲ್ಲಿ ನೀರು ಊರಿ ಬಂದಿತು.

ಆಗಲೇ ಊರ ವೈದ್ಯರನ್ನು ಕರೆಯಲು ಹೋದ ಅಪ್ಪ ಖೋಲಿಯಲ್ಲಿ ಬಂದರು ಕ್ಷಣ ಹೊತ್ತಿನಲ್ಲಿ ಊರ ಜನ ಶಿವನನ್ನು 'ಮಾತಾಡಿಸ'ಲಿಕ್ಕೆ ಗುಂಪು ಗುಂಪಾಗಿ ಬರತೊಡಗಿದರು

'ಈಗ—ಇನ್ನಷ್ಟು ಹೊತ್ತಿಗೆ—ಎಂದು ಕಾಲ ಹಾಕುತ್ತಿದ್ದಾನೆ' ಎಲ್ಲರ ಮುಖದಲ್ಲಿಯೂ ಈ ಮಾತು ಎದ್ದು ತೋರುತ್ತಿತ್ತು.

'ತಾಯಿ ಎಲ್ಲಿ ಹೋಗಿದ್ದಾಳೆ? ನೀರು ಬಿಡಲಿ. ಕರೆಯಿರಿ' ಎಂದರು ಕೂಡಿದ ಜನ.

ಆ ಹೊತ್ತಿಗೆ 'ಅವ್ವಾ........ನೀ ......ರು' ಎಂದು ಶಿವನು ಮೊದಲನೆಯ ಉಸಿರು ಎಳೆದನು ಅದುವೆ ಕೊನೆಯದೂ ಆಯಿತು.

ತಾಯಿಯನ್ನು ಹುಡುಕಲು ನಾನು ಅತ್ತಿತ್ತ ಓಡಾಡಿದೆ. ಮನೆಯಲ್ಲಿ ಕಾಣಲಿಲ್ಲ ನೇರವಾಗಿ ಅಯ್ಯನವರ ಮನೆಯಕಡೆ ಹೋದೆ. ಅಯ್ಯನವರು ಭವಿಷ್ಯದ ಹೊತ್ತಿಗೆ ಬಿಚ್ಚಿದ್ದಾರೆ. ತಾಯಿ ಇದಿರಿನಲ್ಲಿ ಕಣ್ಣೀರು ಹಾಕುತ್ತ ಕುಳಿತಿದ್ದಾರೆ!

'ಶಿವನು ಹೊರಟಿದ್ದಾನೆ. ನೀರು ಬಿಡು ಬಾ ತಾಯಿ.' ಎಂದು ನಾನು ಉಸಿರನ್ನು ನುಂಗುತ್ತಲೇ ಹೇಳಿದೆ. ನಾನು ಈ ಮಾತು ಹೇಳುತ್ತಿರುವಾಗಲೆ ತಾಯಿ ಭವಿಷ್ಯಕ್ಕೆ ಬುದ್ಧೀ ಹೇಳಿದ್ದರು. ಮನೆಯ ಬಾಗಿಲ ನಾನು ಪ್ರವೇಶಿಸುತ್ತಿದ್ದಂತೆಯೆ ಅಳುವುದು ಕೇಳಬಂದಿತು

'ಕನಸು ನಿಜವಾಯಿತೇ........?'

— ಹಿರೇಮಲ್ಲೂರ ಈಶ್ವರನ್

## ಪರಿಚಯ.

ಶ್ರೀ. ಹಿರೆಮಲ್ಲೂರ ಈಶ್ವರನ್. ಎಂ. ಎ; ಇವರು ತರುಣ ಸಾಹಿತಿಗಳಲ್ಲಿ ಒಬ್ಬರು. ಕಾಲೇಜುಗಳಲ್ಲಿರುವಾಗಲೇ ಸಾಹಿತ್ಯದೇವಿಯ ಭಕ್ತರಾಗಬೇಕೆಂಬ ಹಂಬಲವು ಇವರಿಗೆ ಇತ್ತು. ವಿದ್ಯಾರ್ಥಿ ದೆಶೆಗುಲ್ಲಿರುವಾಗಲೇ ಕನ್ನಡದ ಕೃತಿಗಳನ್ನು ಅಭ್ಯಾಸ ಮಾಡಿ, ಮುಂದೆ ಅವರು "ವಿಷ ನಿಮಿಷಗಳು" "ಹಾಲಾಹಲ" ಎಂಬ ಕೃತಿರತ್ನಗಳನ್ನು ಕನ್ನಡಕ್ಕೆ ಸಲ್ಲಿಸಿದ್ದಾರೆ ಈ ಎರಡೂ ಗ್ರಂಥಗಳು ಕನ್ನಡಿಗರ ಆದರಕ್ಕೆ ಪಾತ್ರವಾಗಿವೆ.

ಈಗ ಇವರು ಹುಬ್ಬಳ್ಳಿಯಲ್ಲಿಯ ಶ್ರೀ ಜಗದ್ಗುರು ಗಂಗಾಧರ ವಾಣಿಜ್ಯ ವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ.

ಇಲ್ಲಿ ತೆಗೆದುಕೊಂಡ ಕಥೆಯನ್ನು ಇವರ "ವಿಷನಿಮಿಷಗಳು" ಎಂಬ ಕಥಾಸಂಗ್ರಹದಿಂದ ಆಯ್ದುಕೊಂಡಿದೆ.

**ಟಿಪ್ಪಣಿ:—**

ಬೇಗುದಿ,— ಸಂತಾಪ, ಕಷ್ಟ.
ಸಿಕ್ಕಾಪಟ್ಟೆ;— ಬಾಯಿಗೆ ಬಂದಂತೆ
ಕೈಕಾಲುಬಿಡು;— ಧೈರ್ಯಬಿಡು.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

೧) ತಾಯಿಯು ತಾನು ಕಂಡ ಕನಸನ್ನು ಮಗನಿಗೆ ತಿಳಿಸಲಿಕ್ಕೆ ಏಕೆ ಹಿಂದೆಮುಂದೆ ನೋಡಿದಳು ?

೨) ತಾಯಿ ಕಂಡ ಕನಸನ್ನು ವಿಸ್ತರಿಸಿರಿ

೩) ಆ ಕನಸಿನ ಪರಿಣಾಮವು ಮಗನ ಮೇಲೆ ಮತ್ತು ತಾಯಿಯ ಮೇಲೆ ಯಾವ ರೀತಿಯಾಯಿತು ?

೪) "ಕನಸು ನಿಜವಾಯಿತೇ ?" ಎಂಬ ಕೊನೆಯ ಪ್ರಶ್ನೆಗೆ ತಾಯಿ ಮಗ ಇಬ್ಬರೂ ಯಾವ ಯಾವ ಉತ್ತರಗಳನ್ನು ಕೊಡಬಹುದು ? ನಿಮ್ಮ ಉತ್ತರವೇನು ?

೫) ಕನಸುಗಳ ಬಗ್ಗೆ ನಿಮ್ಮ ಶಿಕ್ಷಕರ, ತಾಯಂದಿರ ಮತ್ತು ತಂದೆಯವರ ಅಭಿಪ್ರಾಯಗಳನ್ನು ತಿಳಿದುಕೊಳ್ಳಿರಿ

೬) ನೀವು ಕಂಡ ಒಂದು ಮಹತ್ವದ ಕನಸನ್ನು ವರ್ಣಿಸಿ ಅದು ನಿಜವಾಯಿತೋ ಎಂಬುದನ್ನು ಹೇಳಿರಿ.

೭) ನಮ್ಮ ಸಮಾಜದಲ್ಲಿಯ ಇಂಥ ಬೇರೆ ೨-೩ ಅಂಧಶ್ರದ್ಧೆಯ ಉದಾಹರಣೆಗಳನ್ನು ಕೊಟ್ಟು, ಅವುಗಳಿಂದ ನಿಜವಾದ ಯಾವ ಕೆಡಕೂ ಆಗದೆ ಅವುಗಳಲ್ಲಿಯ ನಮ್ಮ ನಂಬುಗೆಯೇ ಕೆಲ ಮಟ್ಟಿಗೆ ಆ ಕೆಡಕಿಗೆ ಕಾರಣವೆಂಬುದನ್ನು ತಿಳಿಯಲೆತ್ನಿಸಿರಿ.

೮) "ಸತ್ತ ನಿಮಿಷ ವಿಷ ನಿಮಿಷವಾದರೂ ಅದರ ನೆನಪಿನ ನಿಮಿಷಗಳು ರಸನಿಮಿಷಗಳು" ಚರ್ಚಿಸಿರಿ

**ಸ್ಪಷ್ಟೀಕರಿಸಿರಿ:—**

೧) "ಬಾಳುವೆಯಲ್ಲ ಉಪ್ಪು ನೀರು" ಎಂದು ಒಲೆ ಕೂಗಿತು.

೨) ಹೆವರಗೆ ಬೆಳುದಿಂಗಳು ಹಬ್ಬಿದ್ದರೂ ಕಾಗೆಗಳ ತಲೆಯು 'ಕುಡಿಯಿಟ್ಟಂತೆ ನನ್ನ ಮನದ ಮೇಲೆ ಪರಿಣಾಮವಾಯಿತು.

**ವ್ಯಾಕರಣ:—**

**(ಅ) ಕೆಳಗೆ ಕೊಟ್ಟ ಸಾಮಾನ್ಯ ವಾಕ್ಯಗಳನ್ನು ಕೂಡಿಸಿ ಮತ್ತೊಂದು ಸಾಮಾನ್ಯ ವಾಕ್ಯಮಾಡಿರಿ.**

೧) ಮುಂಜಾನೆ ಕನಸು ಬಿತ್ತು; ಅದು ಎಂದೂ ಹುಸಿಹೋಗುವುದಿಲ್ಲ.

೨) ನಾನು ಸ್ವಲ್ಪ ನೀರು ಕುಡಿದೆನು; ತಾಯಿಗೆ ಅದನ್ನು ಹೇಳಿದೆನು

೩) ನನ್ನ ತಮ್ಮನು ಮುಂಬಯಿಗೆ ಹೋದನು; ಅವನಿಗೆ ವೈದ್ಯಕೀ ಅಭ್ಯಾಸ ಮಾಡಬೇಕಿತ್ತು.

೪) ಗಂಟಿ ಅಯ್ಯಪ್ಪನ ಮುಖಮುದ್ರೆ ಗಂಭೀರವಾಗಿತ್ತು. ಅವನು ಅಕರಾಳ ವಿಕರಾಳನಾಗಿ ತೋರುತ್ತಿದ್ದನು. ಆ ಅಯ್ಯಪ್ಪ ಬಾಗಿಲಲ್ಲಿ ಬಂದು ಕೂಗಾಡಹತ್ತಿದನು

೫) ಆ ಅಯ್ಯಪ್ಪನು ಗಂಟೆ ಬಾರಿಸುತ್ತಿದ್ದನು. ಅವನು ಅಂಕುಶವನ್ನು ನೆಲಕ್ಕೆ ಅಪ್ಪಳಿಸುತ್ತಿದ್ದನು. ತಾಯಿಗೆ ರೂಪಾಯಿಯನ್ನು ಅವನು ಕೇಳಿದನು.

**(ಬ) ಕೆಳಗಿನ ಪಡೆನುಡಿಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.**

| | |
|---|---|
| ಕೈಕಾಲು ಬಿಡು, | (ಧೈರ್ಯಗುಂದು.) |
| ಕಾಲುತೆಗೆ, | (ಓಡಿಹೋಗು) |
| ಕಾಲ್ಗೆಡು, | (ಅಂಜು) |
| ಕಾಲಿಗೆ ಬುದ್ಧಿ ಹೇಳು, | (ಓಡಿ ಹೋಗು.) |

# ೫. ಮಲ್ಲವ್ವ [೧೬೭೮]

"ಮಡಿದನೆನುತಲಳುವ ಹೊತ್ತೆ ?
ಒಡೆಯನಿಲ್ಲದುಳಿವುದೊಳಿತೆ ?
ಒಡಲ ಗಳ್ಳಿರವು ಕೀಳು;
ಒಡೆಯ ಪಡೆಯ ಕಡೆಗೆ ಹಿಡಿದ
ಖಡ್ಗನೆಲ್ಲಿದೆ ? ತನ್ನಿ, ಖಡ್ಗವೆಲ್ಲಿದೆ ?"

— **ಮಲ್ಲಾರಿ.**

'ಹರಹರ ಮಹಾದೇವ ! ಹರಹರ ಮಹಾದೇವ ! ಶಿವಾಜಿ ಮಹಾರಾಜಕೀ ಜಯ !'

"ಇದೇನು ಕೋಲಾಹಲ ? ಎಲ್ಲಿಂದಲೋ ಕೇಳಿಸುತ್ತಲಿದೆ. ನೋಡಿರಿ ನೋಡಿರಿ ಕಾವಲುಗಾರರೇ, ಆ ಕೊತ್ತಳದ ಮೇಲೆ ನಿಂತು ನೀಟಾಗಿ ನೋಡಿರಿ" ನಾಯಕನು ಆಜ್ಞಾಪಿಸಿದನು.

ದೂರ, ಬಹುದೂರದಲ್ಲಿ ಕೆಂಧೂಳಿ. ಆ ಹುಡಿಯ ಮೋಡವು ಹರಡಿಕೊಂಡು ಮುಂದು ಮುಂದಕ್ಕೆ ಸಾಗಿ ಬರುತಲಿದೆ ನಡು ನಡುವೆ ಕುದುರೆಯ ಖುರಪುಟಗಳ ಪಟ ಪಟ ಸಪ್ಪಳವೂ ಹರಹರ ಮಹಾದೇವ ಎಂಬ ಕೂಗಿನ ದನಿಯೂ ಅಸ್ಫುಟವಾಗಿ ಅಲೆಯುತ್ತ ಬರುತ್ತಲಿವೆ.

"ಈ ದಂಡು ಅಷ್ಟಿಷ್ಟು ಆಗಿರುವಂತೆ ಕಾಣದು. ಅದರ ಅಬ್ಬರವು ಹಿರಿದಾಗಿದೆ. ಇವರು ಹಗೆಯಾಗಿಯೆ ಬಂದಿರಲಿಕ್ಕೆ ಸಾಕು. ಗದ್ದರಿಕೆಯ ಶಬ್ದಗಳಿಂದ ನೋಡಿದರಂತೂ ಇವರು ಮರಾಟರೇ ಆಗಿರಬೇಕು. ಈಗ ಕೆಲ ದಿನಗಳಿಂದ ಅವರು ಈ ನಾಡಿನಲ್ಲಿ ನುಗ್ಗಿ ನಡೆಸಿದ ಹಾವಳಿಯ ಸುದ್ದಿಗಳು ಬರುತ್ತಲಿವೆ. ಇವರು ಬೇಕಾದವರು ಆಗಿರಲಿ; ಹೆದರುವುದೇಕೆ ? ಒಡೆಯ

ಈಶಪ್ರಭುಗಳು ಇರುವವರೆಗೆ ಈ ಬೆಳವಡಿ ಕೋಟೆಯು ಯಾರಿಗೂ ತಲೆಬಾಗದು; ಖಂಡಿತ. ನಮ್ಮ ಧ್ವಜವು ಮೇಲುಮೇಲಕ್ಕೆ ಹಾರಾಡಲಿ ಅಕೋ, ಆ ಹಗ್ಗವನ್ನು ಇನ್ನಿಷ್ಟು ಬಿಗಿದು ಅದನ್ನು ನೇರವಾಗಿ ನಿಲ್ಲಿಸಿರಿ ಎಚ್ಚರ, ಬಲು ಎಚ್ಚರ. ಜೋಕೆ, "ಜಯ್ ಜಯ್, ಈಶಪ್ರಭು !"

ಈ ದಂಡು ಮರಾಟರದೆ ಆಗಿತ್ತು. ಮರಾಟರ ಮಹಾರಾಜನಾದ ಶಿವಾಜಿಯು ಇದನ್ನು ಮುಂದೊಡುತ್ತ ಸಾಗಿ ಬರುತ್ತಿದ್ದನು. ಸ್ವಲ್ಪ ಕಾಲದಲ್ಲಿಯೆ ಆತನು ಬೆಳವಡಿಯ ಬಳಿಗೆ ತಲುಪಿದನು ಆತನ ದಂಡಾಳುಗಳು ಕೋಟೆಯ ನೆರೆಯೂರಲ್ಲಿ ಹೊಕ್ಕು ಎಂದಿನಂತೆ ತಮ್ಮ ಸುಲಿಗೆಯ ಕಾಯಕವನ್ನು ನಡೆಸಿದರು. ಈ ನೆವದಿಂದ ಅವರಿಗೂ ಕೋಟೆಯವರಿಗೂ ಜಗಳವು ಹುಟ್ಟಿತು. ಬೆಳವಡಿಯ ಕಲಿಗಳು ಮರಾಟರ ಒರಟುತನವನ್ನು ಸಹಿಸಲಿಲ್ಲ. ಕನ್ನಡಿಗರ ಇದಿರಾಟವನ್ನು ನೋಡಿ ಮರಾಟರು ರೇಗಿದರು ಕೋಟೆಯನ್ನು ಮುತ್ತಿಗೆ ಹಾಕಲು ಅಪ್ಪಣೆಯಾಯಿತು ಆಗಣಿತರಾದ ಶಿವಾಜಿಯ ಭಟರು ಇರುವೆಯಂತೆ ಬೆಳವಡಿ ಕೋಟೆಯನ್ನು ಮುಗಿಬಿದ್ದರು

ಬೆಳವಡಿಯ ದೇಸಾಯಿಯಾದ ಈಶಪ್ರಭು ಇದನ್ನು ನೋಡಿ ಎಷ್ಟೂ ಹೆದರಲಿಲ್ಲ. ಆತನು ಕೋಟೆಯ ಬಾಗಿಲುಗಳನ್ನು ಇಕ್ಕಿಸಿ ಸಮರಕ್ಕೆ ಸಿದ್ಧನಾದನು ಮುತ್ತಿಗೆಯು ಬಹು ದಿನಗಳ ವರೆಗೆ ಮುಂದುವರೆಯಿತು. ಕೋಟೆಯು ಬಹು ಭದ್ರವಾದುದರಿಂದ ಅದನ್ನು ಸುಲಭವಾಗಿ ಕಿತ್ತುಕೊಳ್ಳುವುದು ಶಿವಾಜಿಗೆ ಸಾಧ್ಯವಿರಲಿಲ್ಲ. ಆದರೂ ಸಂಸ್ಥಾನವು ಚಿಕ್ಕದು. ಸಂಸ್ಥಾನಿಕನಲ್ಲಿ ಸೈನ್ಯವಾಗಲಿ ಅನ್ನ ಸಾಮಗ್ರಿಯಾಗಲಿ ಹೆಚ್ಚಿಗೆ ಇರಲಿಕ್ಕಿಲ್ಲ; ಈತನ ಒಲವೆಷ್ಟು ? ಇಂದಿಲ್ಲ ನಾಳೆ ತಾನೇ ಹಣ್ಣಾಗಿ ಶರಣಾಗತನಾಗುವನು; ಸುಮ್ಮನೆ ಹೆಚ್ಚಿನ ಸಾಹಸವೇಕೆ ? ಎಂದು ಆಲೋಚಿಸಿ ಶಿವಾಜಿಯು ಕಾಲವನ್ನು ಕಳೆದನು

ಆದರೆ ಶಿವಾಜಿಯ ಎಣಿಕೆಗಳೆಲ್ಲ ಹುಸಿಯಾದವು. ಎಷ್ಟು ದಿನವಾದರೂ ಕೋಟೆಯು ತಾನಾಗಿ ವಶವಾಗುವ ಚಿನ್ಹೆಗಳು ತೋರಲಿಲ್ಲ. ಕ್ಷುದ್ರವಾದ ಈ ಕೋಟೆಯ ಒಗರನ್ನು ನೋಡಿ ಶಿವಾಜಿಯು ಸೋಜಿಗಗೊಂಡನು. ಕೋಟೆಯನ್ನು ಹೇಗೆ ತೆಗೆದು ಕೊಳ್ಳಬೇಕು ಎಂಬುದನ್ನು ಕುರಿತು ಯೋಚನೆಗೆ ಒಳಗಾದನು. ಆಗ ಶಿವಾಜಿಯ ದಳಪತಿಯು ಒಂದು ಮೋಸದ ಸಂಚಿಕೆಯನ್ನು ಹುಡುಕಿದನು. ಆ ಮೇರೆಗೆ ಕೋಟೆಯೊಳಗಿನ ಕೆಲವು ಮನೆಗಳಿಗೆ ಫಕ್ಕನೆ ಬೆಂಕಿಯು ಹತ್ತಿತು. ದೇಸಾಯಿಯ ದಂಡಾಳುಗಳು ಬೆಂಕಿಯನ್ನು ನಂದಿಸುವದರಲ್ಲಿ ತೊಡಗಿರುವರು ಎಂಬ ಸಂಧಿಯನ್ನು ನೋಡಿ, ಶಿವಾಜಿಯ ಸೈನಿಕರು ಲಗ್ಗೆಯೇರಿ ಕೋಟೆಯೊಳಕ್ಕೆ ನುಗ್ಗಿದರು ಆಗ ಅವರಿಗೂ ಕೋಟೆಯವರಿಗೂ ಘೋರವಾದ ಕದನವು ನಡೆಯಿತು ಅದರಲ್ಲಿ ಈಶಪ್ರಭು ಪತನ ಹೊಂದಿದನು

'ಘಾತವಾಯಿತು! ಒಡೆಯನು ಮಡಿದನು. ದಂಡಾಳುಗಳು ಕಣಬಿಟ್ಟು ಓಡಿಹೋಗುತ್ತಿರುವರು ಕೋಟೆಯು ಕೈಬಿಟ್ಟು ಹೋಗುತ್ತಲಿದೆ. ಎಂಬ ಅಶುಭ ವಾರ್ತೆಯು ಈಶಪ್ರಭುವಿನ ಅರ್ಧಾಂಗಿಯಾದ ಮಲ್ಲವ್ವನಿಗೆ ತಲುಪಿತು. ಕೂಡಲೆ ಆಕೆಯು ಮಿಕ್ಕಾವ ಯೋಚನೆ ಮಾಡದೆ ಸಮರಾಂಗಣಕ್ಕೆ ಧಾವಿಸಿದಳು. ವೀರಶೈಯ್ಯೆಯಲ್ಲಿ ಒರಗಿದ ತನ್ನ ಒಡೆಯನ ಮಗ್ಗುಲಲ್ಲಿ ಬಿದ್ದಿರುವ ಕತ್ತಿಯನ್ನು ತನ್ನ ಕೈಯಲ್ಲಿ ಎತ್ತಿಕೊಂಡಳು. ಕುದುರೆಯನ್ನೇರಿ ಎದೆಗೆಟ್ಟು ಹಿಂದಿರುಗುತ್ತಿರುವ ತನ್ನ ಬಂಟರನ್ನು ಹುರಿದುಂಬಿಸಿದಳು ಆಕೆಯ ವೀರಾವೇಶವನ್ನು ನೋಡಿ ಎದೆಗೆಟ್ಟ ಅವರ ಎದೆಯಲ್ಲಿ ಮತ್ತೆ ಸ್ಫೂರ್ತಿಯ ಸಂಚಾರವಾಯಿತು. ಅವರು ಮರಳಿ ಮರಾಟರೊಡನೆ ಕಾದಲನುವಾದರು. ಸ್ವಲ್ಪ ವೇಳೆಯಲ್ಲಿ ಅವರು ಹಗೆಯನ್ನು ಹಣಿವಿಕ್ಕಿ ಕೋಟೆಯ ಹೊರಕ್ಕೆ ನೂಕಿದರು. ಕನ್ನಡಿಗರ ಧ್ವಜವು ನಿರ್ಭಯವಾಗಿ ಕೋಟೆಯ ಮೇಲೆ ಮೆರೆದಾಡತೊಡಗಿತು ಮಲ್ಲವ್ವನ ಜಯಜಯಕಾರವು

ಮರಾಟರ ಕಿವಿಗಳನ್ನು ಗಡಚಿಕ್ಕುತ್ತ ಅವರ ಎದೆಗಳನ್ನು ನಡುಗಿಸಿತು.

ಈ ಸುದ್ದಿಯನ್ನು ಕೇಳಿ ಶಿವಾಜಿಗೆ ದಿಗ್ಭ್ರಮೆಯಾಯಿತು. ಇದೆಂತಹ ಪ್ರಸಂಗವು ತನಗೆ ಒದಗಿತಲ್ಲ ಎಂದು! ಆತನೇನು ಸಾಮಾನ್ಯನೇ? ವಿಜಾಪುರದ ಬಾದಶಹನನ್ನು ಕಂಗೆಡಿಸಿದ ಕಲಿ-ಅಫಜುಲಖಾನನಂತಹ ಆನೆಯನ್ನು ಸೀಳಿದ ಸಿಂಗ. ಭಾರತ ಚಕ್ರವರ್ತಿಯಾದ ಔರಂಗಜೇಬನಿಗೆ ಇಂಗು ಹಚ್ಚಿದ ತಂತ್ರಗಾರ; ಇಂತಿಂತಹ ಬಲಾಢ್ಯ ವೈರಿಗಳನ್ನು ನೆಲಕ್ಕುರುಳಿಸಿ ಸ್ವರಾಜ್ಯ ಸ್ಥಾಪನೆಯನ್ನು ಮಾಡಿದ ಧೀರ. ಬಳಿಕ ಸುಮಾರು ಎರಡು ವರ್ಷಗಳ ಹಿಂದೆ (೧೬೭೬) ಆತನು ದಕ್ಷಿಣ ದಿಗ್ವಿಜಯಕ್ಕಾಗಿ ಹೊರಟಿದ್ದನು. ಜಿಂಜಿ, ವೆಲ್ಲೂರಂತಹ ದುರ್ದಮನೀಯವಾದ ದುರ್ಗಗಳನ್ನು ಕಿತ್ತುಕೊಂಡಿದ್ದನು. ಇದೀಗ ಉತ್ತರಕ್ಕೆ ತನ್ನ ರಾಜ್ಯದತ್ತ ಸಾಗಿದ್ದನು. ಇಂತಹ ಮಹಾರಾಜನಿಗೆ ಬೀಳಾದ ಕರ್ನಾಟಕದ ಒಂದು ಚಿಕ್ಕ ಸಂಸ್ಥಾನದ ಮುಂದ ಮುಗ್ಗರಿಸಿ ಬೀಳುವ ಹೊತ್ತು ಬರಬೇಕೆ? ಇಂತಹ ವೀರಾಧಿವೀರನು ಬಳೆಯಿಟ್ಟ ಒಬ್ಬ ಅಬಲೆಗೆ ಸೋತು ಕೈಯೂರಬೇಕೆ? ಆತನ ಕೀರ್ತಿಗೆ ಎಂತಹ ಕಲಂಕವಿದು!

ಶಿವಾಜಿಯು ಪರಾಜಯದ ವರ್ತಮಾನವು ಕೂಡಲೆ ಎಲ್ಲೆಲ್ಲಿಯೂ ಹಬ್ಬಿತು. ಅಪೂರ್ವವಾದ ಈ ಘಟನೆಯನ್ನು ಕೇಳಿ ಎಲ್ಲರೂ ಬೆರಗುಗೊಂಡರು "ಎಂತಹ ಶೂರನಪ್ಪ ಈತನು! ಒಬ್ಬ ವಿಧವೆಯ ಕೈಯಿಂದ ಏಟು ತಿಂದು ನರಳುತ್ತಿದ್ದಾನೆ! ಎಂದು ಕೆಲವರು ಅಣಕವಾಡಿದರು.

ಸೋತವನಾದರೂ ಶಿವಾಜಿಯು ಕೋಟೆಯನ್ನು ಬಿಟ್ಟು ತೆರಳಲಿಲ್ಲ. ಮುತ್ತಿಗೆಯ ಕೆಲಸವು ಮತ್ತೆ ಮುಂದುವರಿಯಿತು. ಇಪ್ಪತ್ತೇಳು ದಿನಗಳು ಕಳೆದವು. ಒಳಗಿನ ಅನ್ನ ಸಾಮಗ್ರಿಯೂ

ಮದ್ದುಗುಂಡಿನ ಸಂಗ್ರಹವೂ ತೀರಿತು. ಮುಂದೇನು ಎಂಬ ಚಿಂತೆಯು ಕೋಟೆಯ ಒಳಗಿನವರನ್ನು ಪೀಡಿಸತೊಡಗಿತು. ನಿರಾಹಾರದ ಸಮಯವು ಬಂದಿತು. ಇನ್ನು ಮುಂದೆ ಕೋಟೆಯನ್ನು ಉಳಿಸಿಕೊಳ್ಳುವುದು ಅಸಾಧ್ಯವೆಂದು ಮಲ್ಲವ್ವನು ಮನಗಂಡಳು ಆದರೂ ಆಕೆಯು ಎದೆಗುಂದಲಿಲ್ಲ. ಆಕೆಯು ಕೋಟೆಯ ಬಾಗಿಲುಗಳನ್ನು ತೆರೆದು ತನ್ನ ಅನುಯಾಯಿಗಳೊಂದಿಗೆ ಹೊರಬಿದ್ದಳು ಚಂಡ ಪರಾಕ್ರಮದಿಂದ ಥಕ್ಕನೆ ಶಿವಾಜಿಯ ಸೇನಾಸಮುದ್ರದ ಮೇಲೆ ಎರಗಿದಳು. ಹಗೆಗಳನ್ನು ತುಂಡರಿಸುತ್ತ ಮುಂದೆ ನುಗ್ಗಿದಳು.

ಈ ಮೇರೆಗೆ ಮಲ್ಲವ್ವನು ವಿಲಕ್ಷಣವಾದ ಶೌರ್ಯವನ್ನು ಸೂರೆಗೊಳ್ಳುತ್ತ ಇಡಿಯ ದಿನವೆಲ್ಲ ಕಾದಿದಳು. ಕ್ರೂರವಾದ ಆಕೆಯ ಕತ್ತಿಯು ನೂರಾರು ಮರಾಟರನ್ನು ಬಲಿಗೊಂಡಿತು. ಕೊನೆಯ ವರೆಗೆ ಆಕೆಯು ಸೋಲಲಿಲ್ಲ; ಹಿಂಜರಿಯಲಿಲ್ಲ; ಆದರೆ ಅಪಾರವಾದ ಆ ಶತ್ರುಬಲದ ಮುಂದೆ ಹಿಡಿ ಮುಷ್ಟಿಯಾದ ಈಕೆಯ ಜನರು ಎಷ್ಟಾದರೂ ಏನು ಮಾಡಬಲ್ಲರು? ಬರಬರುತ್ತ ಆಕೆಯ ಅನುಯಾಯಿವರ್ಗವು ಕರಗತೊಡಗಿತು. ಮಲ್ಲವ್ವನ ಬೆಂಗಾವಲಿನ ಕೆಲವರನ್ನುಳಿದು ಮಿಕ್ಕವರೆಲ್ಲರೂ ಹತರಾದರು. ಆಗ ಆಕೆಯು ನಿರುಪಾಯಳಾಗಿ ತನ್ನ ಕುದುರೆಯನ್ನು ಬಹುವೇಗದಿಂದ ಓಡಿಸುತ್ತ ರಣಾಂಗಣದಿಂದ ಹೊರಟಳು.

ಇದನ್ನು ನೋಡಿ ಶಿವಾಜಿಯ ದಳವಾಯಿಯಾದ ದಾದಾಜಿಯು ಆಕೆಯನ್ನು ಬೆನ್ನಟ್ಟಿದನು. ಆತನು ಆಕೆಯನ್ನು ಸಮೀಪಿಸಿ ಆಕೆಯ ಕುದುರೆಯ ಹಿಂಗಾಲನ್ನು ಕಡಿದನು. ಕುದುರೆಯು ನೆಲಕ್ಕೆ ಉರುಳಿತು. ಬಳಿಕ ಮಲ್ಲವ್ವನು ಪಾದಚಾರಿಣಿಯಾಗಿ ತನ್ನನ್ನು ಬೆಂಬತ್ತಿದ ಹಗೆಯೊಂದಿಗೆ ಕಾದಲನುವಾದಳು ಅಷ್ಟರಲ್ಲಿ ಆಕೆಗೆ ಒಂದು ದೊಡ್ಡ ಗಾಯವಾಯಿತು. ನೆತ್ತರವೂ ಹೊನಲಾಗಿ ಹರಿಯತೊಡಗಿತು. ಆದರಿಂದ ಆಕೆಯು ಬಲಗುಂದಿ

ಬಸವಳಿದಳು. ಆಗ ದಾದಾಜಿಯು ಆಕೆಯನ್ನು ಸೆರೆ ಹಿಡಿದು ತನ್ನ ದೊರೆಯ ಬಳಿಗೆ ಕರೆದೊಯ್ದನು.

ಮಹಾನುಭಾವನಾದ ಶಿವಾಜಿಯು ಮಲ್ಲವ್ವನೊಡನೆ ಮರ್ಯಾದೆಯಿಂದ ನಡೆದುಕೊಂಡನು ಆಕೆಯ ಪರಾಕ್ರಮವನ್ನು ಪ್ರಶಂಸಿಸಿ, ಉಡುಗೊರೆಯನ್ನು ಕೊಟ್ಟು ಉಚಿತವಾಗಿ ಸನ್ಮಾನಿಸಿದನು. ಉಂಬಳಿಯಾಗಿ ಎರಡು ಊರುಗಳನ್ನು ನೀಡಿದನು

— **ದೇಸಾಯಿ ಪಾಂಡುರಂಗರಾಯರು.**



# ಪರಿಚಯ

ಶ್ರೀ ದೇಸಾಯಿ ಪಾಂಡುರಂಗರಾವ ಎಮ್. ಎ. ಇವರು ಕನ್ನಡಿಗರಿಗೆ ಚಿರಪರಿಚಿತರು. ಕರ್ನಾಟಕ ಇತಿಹಾಸ ಸಂಶೋಧಕರಲ್ಲಿ ಒಬ್ಬರಾಗಿದ್ದಾರೆ ಇವರ ಸಂಶೋಧನೆಯಿಂದ ಕನ್ನಡ ಇತಿಹಾಸಕ್ಕೆ ಕಳೆಬಂದಿದೆ ಇವರು "ವಿಜಯನಗರ ಸಾಮ್ರಾಜ್ಯ" "ಕರ್ನಾಟಕ ಸಂಸ್ಕೃತಿ" "ಕನ್ನಡ ನಾಡಿನ ಮಿಂಚಿದ ಮಹಿಳೆಯರು" ಮೊದಲಾದ ಅಮೌಲ್ಯ ಗ್ರಂಥಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟು, ಆ ಗ್ರಂಥ ರಾಶಿಯನ್ನು ಬೆಳೆಸಿದ್ದಾರೆ ಈಗ ಇವರು ಮದ್ರಾಸ ಇಲಾಖೆಯಲ್ಲಿ ಪ್ರಾಚ್ಯ ಸಂಶೋಧನ ಶಾಖೆಯ ಅಧಿಕಾರಿಗಳಾಗಿ ಕೆಲಸ ಮಾಡುತ್ತಲಿದ್ದಾರೆ

ಇಲ್ಲಿ ತೆಗೆದುಕೊಂಡ ಭಾಗವು "**ಕನ್ನಡನಾಡಿನ ಮಿಂಚಿದ ಮಹಿಳೆಯರು**" ಈ ಹೊತ್ತಿಗೆಯಲ್ಲಿಯದು.

**ಟಿಪ್ಪಣಿಗಳು:—**

ಒಡಲುಗಳ್ಳರು; ಪುಕ್ಕರು.
ಒಗರು; ಶಕ್ತಿ
ಎದೆಗೆಡು; ಅಂಜು.
ಇಂಗುಹಚ್ಚು; ಮೋಸಮಾಡು.
ದುರ್ದಮನೀಯ; ವಶಪಡಿಸಿಕೊಳ್ಳಲು ಬಾರದ.

**ಅಭ್ಯಾಸಃ—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ —**

೧ ಬೆಳವಡಿಯ ಕಾಳಗವು ಹೇಗೆ ಪ್ರಾರಂಭವಾಯಿತು ? ಎಣಿಕೆ ಏನಿತ್ತು ? ಅದು ಹುಸಿಯಾದ ಮೇಲೆ ಶಿವಾಜಿಯ ದಳಪತಿಯು ಏನು ಮಾಡಿದನು ?

(೨) ಮಲ್ಲವ್ವನ ಶೂರತನದ ಹೋರಾಟವನ್ನು ಬಣ್ಣಿಸಿರಿ.

(೩) 'ಕಿತ್ತೂರ ಚೆನ್ನಮ್ಮನ' ಚರಿತ್ರವನ್ನು ಸಂಗ್ರಹಿಸಿ ಈರ್ವರನ್ನು ಹೋಲಿಸಿರಿ.

(೪) "ಮಿಂಚಿದ ಮಹಿಳೆಯರು" ಎಂಬ ಪುಸ್ತಕದೊಳಗಿನ ಮಲ್ಲಮ್ಮನ ಚರಿತ್ರೆಯನ್ನು ಹೋಲುವ ಇನ್ನಿತರ ಚರಿತ್ರೆಗಳನ್ನು ಸಂಗ್ರಹಿಸಿರಿ.

(೫) ಕರ್ನಾಟಕ ಇತಿಹಾಸದಲ್ಲಿ ದೇಸಾಯಿ, ದೇಶಪಾಂಡೆ, ಜಹಾಗೀರದಾರ ಮತ್ತು ಪಾಳೆಯಗಾರರ ಇತಿಹಾಸವು ಮನೋರಂಜಕವೂ ಉದ್ಬೋಧಕವೂ ಆಗಿದೆ. ಮುಂದೆ ಕೊಟ್ಟವರ ಪರಿಚಯವನ್ನು ಮಾಡಿಕೊಳ್ಳಿರಿ. ನರಗುಂದ ಬಾಬಾಸಾಹೇಬ ಮುಂಡರಗಿಯ ಭೀಮರಾವ, ಹಮ್ಮಿಗೆಯ ದೇಸಾಯರು.

(೬) ನಿಮಗೆ ಗೊತ್ತಿದ್ದ ಒಂದು ಕಾಳಗದ ವರ್ಣನೆಯನ್ನು ಬರೆಯಿರಿ.

(೭) ಕೆಳಗಿನ ವಾಕ್ಯಗಳು ಯಾವ ಭಾವನೆಯನ್ನು ವ್ಯಕ್ತಪಡಿಸುತ್ತವೆ ?

(ಅ) ಒಡೆಯ ಈಶಪ್ರಭುಗಳು ಇರುವವರೆಗೆ ಈ ಬೆಳವಡಿ ಕೋಟೆಯು ಯಾರಿಗೂ ತಲೆಬಾಗದು.

ಜಯ್, ಜಯ್ ಈಶಪ್ರಭು !

(ಬ) ಮಹಾನುಭಾವನಾದ ಶಿವಾಜಿಯು ಮಲ್ಲವ್ವನೊಡನೆ ಮರ್ಯಾದೆಯಿಂದ ನಡೆದುಕೊಂಡನು.

**ವ್ಯಾಕರಣ: —**

(೧) ಮರಾಟರು ಈ ನಾಡಿನಲ್ಲಿ ಹಾವಳಿ ಮಾಡಿದರು. ನಾಡಿನವರು ಹೆದರಿದರು. ( ಒಂದು ವಾಕ್ಯ ಮುಖ್ಯವಿಟ್ಟು ಉಳಿದ ವಾಕ್ಯದ ಸ್ಥಳದಲ್ಲಿ **ನಾಮಪದ** ಉಪಯೋಗಿಸಿರಿ.)

(೨) ಆತನ ದಂಡಾಳುಗಳು ಕೋಟೆಯ ನೆರೆಯೂರಲ್ಲಿ ತಮ್ಮ ಸುಲಿಗೆಯ ಕಾಯಕವನ್ನು ನಡೆಸಿದರು ಈ ನೆವದಿಂದ ಅವರಿಗೂ ಕೋಟೆಯವರಿಗೂ ಜಗಳ ಹುಟ್ಟಿತು (ಒಂದು ವಾಕ್ಯ ಮುಖ್ಯವಿಟ್ಟು ಉಳಿದ ವಾಕ್ಯದ ಸ್ಥಳದಲ್ಲಿ **ನಾಮಪದ** ಉಪಯೋಗಿಸಿರಿ )

(೩) ಬೆಳವಡಿಯ ಕಲಿಗಳು ಮರಾಟರ ಒರಟುತನವನ್ನು ಸಹಿಸಲಿಲ್ಲ; ಕನ್ನಡಿಗರ ಕಲಿತನವನ್ನು ತೋರಿಸಿದರು. (ಒಂದು ವಾಕ್ಯ ಮುಖ್ಯವಿಟ್ಟು ಉಳಿದ ವಾಕ್ಯದ ಸ್ಥಳದಲ್ಲಿ **ಕೃದಂತಾವ್ಯಯ** ಉಪಯೋಗಿಸಿರಿ)

(೪) ಶಿವಾಜಿಯ ಎಣಿಕೆಗಳೆಲ್ಲ ಹುಸಿಯಾದವು. ಆಗ ಅವನ ದಳಪತಿಯು ಮೋಸದ ಹಂಚಿಕೆಯನ್ನು ಹುಡುಕಿದನು. (ಒಂದು ವಾಕ್ಯ ಮುಖ್ಯವಿಟ್ಟು ಉಳಿದ ವಾಕ್ಯದ ಸ್ಥಳದಲ್ಲಿ **ಕೃದಂತಾವ್ಯಯ** ಉಪಯೋಗಿಸಿರಿ.)

(೫) ಶಿವಾಜಿಯ ಸೈನಿಕರು ಶೂರರು; ಈ ಪ್ರಭುವಿನ ಸೈನಿಕರು ಹೆಚ್ಚು ಶೂರರು (ತುಲನೆಯಿಂದ ಸಾಮಾನ್ಯ ವಾಕ್ಯ ಮಾಡಿರಿ)

(೬) ಕೆಳಗಿನ ನುಡಿಗಳಿಗೆ **ಮೇಳನುಡಿಗಳನ್ನು** ಕೊಡಿರಿ.
ಕೂಗು, ಸಪ್ಪಳ, ಪ್ರಭು, ಹೆದರು, ಬಂಟ, ಘಕ್ಕನೆ.



# ೬. ಗುರುವಿನ ಅನುಗ್ರಹ

ಹೀಗೆ ಸಂಕಟ ಸಮಯದಲ್ಲಿ ಶ್ರೀಗುರುಮೂರ್ತಿಯ ದರ್ಶನವು ಅಕಲ್ಪಿತವಾಗಿ ಆದುದರಿಂದ ಆ ಮೂವರಿಗೂ ಪರಮಾನಂದವಾಯಿತು ಅವರು ಒಬ್ಬೊಬ್ಬರೇ ಗುರುಚರಣಕ್ಕೆ ಸಾಷ್ಟಾಂಗವಾಗಿ ಎರಗಿದರು ಸಮರ್ಥರು ಒಳ್ಳೆಯ ಸುಪ್ರಸನ್ನ ಮನಸ್ಸಿನಿಂದಲೂ, ನಗೆಮೊಗದಿಂದಲೂ ಅವರನ್ನು ಆಶೀರ್ವದಿಸಿದರು. ಅಲ್ಲಿ ಮಂಡಿಸಿದ್ದ ವ್ಯಾಸಪೀಠದಲ್ಲಿ ಶ್ರೀ ಗುರುಮೂರ್ತಿಯು ಕುಳಿತುಕೊಳ್ಳಲು, ಎಲ್ಲರೂ ಪ್ರಸನ್ನವದನರಾಗಿ ಭಯಭಕ್ತಿಯಿಂದ ಅವರ ಎದುರಿಗೆ ಕುಳಿತುಕೊಂಡರು ಆನಂದದ ಭರದಲ್ಲಿ ಕೆಲ ಹೊತ್ತಿನ ವರೆಗೆ ಯಾರ ಮುಖದಿಂದಲೂ ಮಾತುಗಳು ಹೊರಡಲಿಲ್ಲ. ಮಹಾರಾಜರು ತಮ್ಮ ವಿಶಾಲವಾದ ನೇತ್ರಗಳಿಂದ ಗುರುಮೂರ್ತಿಯನ್ನು ನೋಡುತ್ತ ಕುಳಿತುಕೊಂಡಿದ್ದರು. ತಾವು ಮಹತ್ಸಂಕಟದಲ್ಲಿರುವಾಗ ಶ್ರೀ ಗುರುಮೂರ್ತಿಯು ತಮ್ಮ ಯೋಗಕ್ಷೇಮ ವಿಚಾರಿಸಲು ಬಂದದ್ದೊಂದು ಸುಕ್ಷಣವೆಂದು ಅವರು ತಿಳಿದುಕೊಂಡರು. ಕೆಲಹೊತ್ತು ಸ್ವಸ್ಥ ಕುಳಿತುಕೊಂಡ ಬಳಿಕ ಸಮರ್ಥರು ಒಮ್ಮೆಲೆ ಮಹಾರಾಜರನ್ನು ಕುರಿತು—"ಶಿವಬಾ" ನೀನು ಇಷ್ಟು ಖಿನ್ನನಾಗಬೇಡ. ಅಪ್ಪಾ, ದೊಡ್ಡ ರಾಜಮಂದಿರವನ್ನು ಕಟ್ಟುವವನು ಯಾವಾಗಾದರೊಮ್ಮೆ ಸೋತು ನಡೆಯಬೇಕಾಗುವದು ಯಾವಾಗಲೂ ಶಕ್ತಿಯಿಂದಲೇ ಕಾರ್ಯವು ಸಾಧಿಸುತ್ತದೆಂದು ತಿಳಿಯಬೇಡ; ಒಮ್ಮೊಮ್ಮೆ ಯುಕ್ತಿಯಿಂದಲೂ ಕಾರ್ಯವನ್ನು ಸಾಧಿಸಬೇಕಾಗುವದು. ಕಾರ್ಯಸಾಧಕನು ಒಮ್ಮೆ

ಮುಂದಕ್ಕೆ ಸರಿಯಬೇಕಾಗುವದು, ಒಮ್ಮೆ ಹಿಂದಕ್ಕೆ ಸರಿಯ ಬೇಕಾಗುವದು. ಮುಖ್ಯವಾಗಿ ಆತನು ಕಾರ್ಯಸಾಧನದಲ್ಲಿ ಲಕ್ಷವಿಡಬೇಕು. ಜಯಸಿಂಗನು ಹೇಳಿದಂತೆ ನೀನು ನಡೆದು ಕೊಂಡು ಒಡಂಬಡಿಕೆ ಮಾಡಿಕೊಳ್ಳಲು ಬಾಧಕವಿಲ್ಲ ಈಗ ನಡೆದಿರುವ ಜನ ಸಂಹಾರವೂ ಪ್ರಜಾತಾಪವೂ ಅನಿಷ್ಟವಾಗಿರುವದ ರಿಂದ, ಅದನ್ನು ನಿಲ್ಲಿಸಲಿಕ್ಕೆ ಜಯಸಿಂಗನ ಮಾತನ್ನು ನಡೆಸಲೇ ಬೇಕು. ನೀನು ಆರಂಭಿಸಿದ ಕಾರ್ಯದ ಗೌರವವನ್ನು ಜಯ ಸಿಂಗನು ತಿಳಿದುಕೊಂಡಿಲ್ಲ. ತಿಳಿದುಕೊಳ್ಳುವ ಇಚ್ಛೆಯು ಆವ ನಿಗಿಲ್ಲ; ಅಂದಬಳಿಕ ನಾವು ಮೇಲುಬಿದ್ದು ಆತನಿಗೆ ತಿಳಿಸ ಹೋಗುವದರಲ್ಲಿ ಅರ್ಥವೇನು ? ಸೂರ್ಯನು ಎಂಥ ತೇಜೋ ರಾಶಿಯು ! ಅಂಥವನಿಗೂ ಉದಯಾಸ್ತಗಳೂ ಗ್ರಹಣಗಳೂ ಆಗಿ, ತೇಜೋಭಂಗವಾಗುತ್ತಿರುವಾಗ, ನಮ್ಮಂಥ ಕ್ಷುದ್ರರ ಪಾಡೇನು ? ಕಾರ್ಯಾರ್ಥಿಯು ಬಿಸಿಲು ಬಂದತ್ತ ಕೊಡೆಹಿಡಿಯು ಬೇಕಾಗುವದು ಆತನು ಉದ್ದೇಶವನ್ನು ಮಾತ್ರ ಮರೆಯದೆ ಕಾರ್ಯಸಾಧನಾರ್ಥವಾಗಿ ಉದ್ಯೋಗ ಮಾಡುತ್ತಲಿದ್ದರಾಯಿತು ಜಯಸಿಂಗನ ಮನಸ್ಸನ್ನು ಒಲಿಸುವ ಗೊಡವೆಗೆ ನೀನು ಸರ್ವಥಾ ಹೋಗಬೇಡ. ತನ್ನ ಮನಸ್ಸಿನಂತೆ ಕಾರ್ಯವಾಯಿತೆಂಬ ನಂಬಿ ಗೆಯಾದ ಹೊರತು ಆತನು ಯಾವ ಮಾತನ್ನೂ ಕೇಳನು. ನಿನಗೆ ಕೇಡಾಗಬೇಕೆಂದು ಆತನ ಮನಸ್ಸಿನಲ್ಲಿರುವದಿಲ್ಲ, ತಾನು ಬಂದ ಕಾರ್ಯವು ಮೊದಲು ಈಡೇರಬೇಕೆಂದು ಆತನು ಇಚ್ಛಿ ಸುತ್ತಿರುವನು. ಅಂದ ಬಳಿಕ ನೀನು ಸದ್ಯಕ್ಕೆ ಸೋತು ನಡೆ ಯಲೇಬೇಕು. ಭಗವಾನ್ ದಾಶರಥಿ ಶ್ರೀರಾಮನಿಗೂ ವನವಾ ಸವು ತಪ್ಪಲಿಲ್ಲವೆಂದ ಬಳಿಕ ನಮ್ಮ ಪಾಡೇನು ? ಬರುವದೆಲ್ಲ ನಮ್ಮ ಹಿತಕ್ಕಾಗಿಯೇ ಬರುವದೆಂದು ತಿಳಿದು, ಜಗದಂಬೆಯು ಸ್ವಪ್ನದಲ್ಲಿ ಸೂಚಿಸಿದ್ದನ್ನು ಲಕ್ಷ್ಯದಲ್ಲಿಟ್ಟು ಒಡಂಬಡಿಕೆಯ ಉದ್ಯೋ ಗವನ್ನು ನಡಿಸು ನಾನು ಇನ್ನು ತೀರ್ಥಾಟನೆಗೆ ಹೋಗುವ

ಬೇಕೆಂದಿರುವೆನು. ಕೆಲವು ದಿನ ನಿನಗೆ ನಮ್ಮ ದರ್ಶನವಾಗ ಲಾರದು ನಮಗೆ ಒಮ್ಮಿಂದೊಮ್ಮೆ ತೀರ್ಥಾಟನೆಗೆ ಹೊರಡುವ ಪ್ರೇರಣೆಯಾಗಿದೆ ಪ್ರೇರಣೆಯೆಂದರೆ ನಮಗಾದ ಆಜ್ಞೆಯೇ ಸರಿ. ಆಜ್ಞೆಯಾದಬಳಿಕ ಒಂದು ಕ್ಷಣದ ವಿಲಂಬವೂ ಆಗಲಾರದು. ನಾವೊಬ್ಬರೇ ತೀರ್ಥಯಾತ್ರೆಗೆ ಹೊರಡುವೆವು. ನಾವು ಯಾವಾಗ ಅದೃಶ್ಯವಾದೇವೆಂಬದರ ನಿಯಮವಿಲ್ಲ, ಆದರೆ ನಿನಗೆ ತಿಳಿಸದೆ ಮಾತ್ರ ಅದೃಶ್ಯವಾಗುವದಿಲ್ಲ."

ಇಂಥ ವಿಪತ್ಕಾಲದಲ್ಲಿ ಶ್ರೀಗುರುವಿನ ವಿಯೋಗವಾಗುವ ದನ್ನು ಕೇಳಿ ಮಹಾರಾಜರಿಗೆ ಪರಮ ವಿಷಾದವಾಯಿತು; ಮತ್ತು ಶ್ರೀಗುರುವು ಒಬ್ಬನೇ ತೀರ್ಥಯಾತ್ರೆಗೆ ಹೊರಡುವದ ನ್ನರಿತು ಅವರು ಶಂಕಿಸಿದರು. ಆಗ ಅವರು ವಿನಯದಿಂದ ಗುರುಗಳನ್ನು ಕುರಿತು—"ಏನು ? ತಾವು ಒಬ್ಬರೇ ತೀರ್ಥಾಟ ನೆಗೆ ಹೊರಡುವಿರಾ ? ಛೇ, ಛೇ ! ತಮ್ಮ ಸಂರಕ್ಷಣಕ್ಕಾಗಿ ಸ್ವಲ್ಪವಾದರೂ ಸಿಬ್ಬಂದಿಯನ್ನು ಕೊಡದೆ ನಾನು ಕಳಿಸಲಾರೆನು; ಆದರೆ ಮಹಾರಾಜ, ಈಗಿನ ಕಠಿಣ ಕಾಲದಲ್ಲಿ ತಾವು ತೀರ್ಥಾ ಟನೆಗೆ ಹೋಗುವದರಿಂದ ನನ್ನ ಯಶೋದೇವತೆಯೇ ಹೊಂಟು ಹೋದಂತಾಗುತ್ತದೆ. ತಮ್ಮ ದರ್ಶನವು ಮೇಲಿ ಮೇಲೆ ಆಗದಿ ದ್ದರೂ ತಾವು ಸಮೀಪದಲ್ಲಿರುವಿರೆಂಬ ಧೈರ್ಯದಿಂದ ನಮ್ಮ ಕಾರ್ಯಗಳೆಲ್ಲ ಸಮಾಧಾನದಿಂದ ನಡೆಯುತ್ತಿರುವವು. ಅಂಥ ಪ್ರಸಂಗವು ಒದಗಿದರೆ ತಟ್ಟನೆ ಹೋಗಿ ದರ್ಶನ ಮಾಡಿಕೊಂಡು ಬಂದೇನೆಂಬ ಧೈರ್ಯವು ನನಗಿತ್ತು; ಆದರೆ ತಾವು ತೀರ್ಥಾ ಟನಕ್ಕೆ ಹೋಗುವದರಿಂದ ನನ್ನ ಆಧಾರವೇ ತಪ್ಪಿದ ಹಾಗಾಗು ತ್ತದೆ." ಅನ್ನಲು, ಸಮರ್ಥರು— "ಅಪ್ಪಾ, ನನ್ನ ಸಂರಕ್ಷಣದ ಆಲೋಚನೆಯನ್ನು ಯಾರು ಮಾಡುವರು ? ದಾಶರಥಿ ಶ್ರೀರಾಮ ನಿಗೆ ಅದರ ಆಲೋಚನೆ ಇರುವದು. ಆತನ ಹೊರತು ಬೇರೆ

ಯವರು ಆ ಆಲೋಚನೆ ಮಾಡಲಿಕ್ಕೆ ಸಮರ್ಥರಲ್ಲ. ಸುಮ್ಮನೆ ನೀನು ಆ ಹುಚ್ಚಿಗೆ ಯಾಕೆ ಹೋಗುತ್ತೀ ? ನಾವು ಸ್ವಚ್ಛಂದಿಗಳು. ಬೇಕಾದಾಗ ಮನಸ್ಸಿಗೆ ಬಂದತ್ತ ಹೋಗುವವರು. ಮುಂದಿನ ಕ್ಷಣದಲ್ಲಿ ಏನು ಮಾಡಬೇಕೆಂಬುದರ ವಿಚಾರವು ನಮಗಿರುವದಿಲ್ಲ. ಸಿಬ್ಬಂದಿ-ಶಿಪಾಯಿಗಳು ನಮಗೇತಕಪ್ಪಾ ? ನಾವು ಇನ್ನು ಒಂದೆರಡು ವರ್ಷ ತೀರ್ಥಾಟನ ಮಾಡತಕ್ಕವರೇ ಹೋದಲ್ಲಿ ಮಠವನ್ನು ಕಟ್ಟುವೆವು. ಅಲ್ಲಿ ಬೇಕಾದಷ್ಟು ದಿವಸ ಇರುವೆವು. ಅಲ್ಲಿಂದ ಬೇರೊಂದು ಕಡೆಗೆ ಹೊರಟು ಹೋಗುವೆವು ಮನಸ್ಸಿಗೆ ಬಂದರೆ ತಿರುಗಿ ಬರುವೆವು; ಇಲ್ಲದಿದ್ದರೆ ಬದರೀನಾರಾಯಣಕ್ಕೆ ಹೋಗಿ ಅಲ್ಲಿಂದ ಪ್ರಯಾಣ ಮಾಡಿದರೂ ಮಾಡಬಹುದು. ಅದು ಹೇಗೇ ಇರಲಿ, ತೀರ್ಥಾಟನೆಗೆ ಹೊರಡಬೇಕೆಂದು ರಘುನಾಥನ ಅಪ್ಪಣೆಯಾಗಿರುವದರಿಂದ, ನಾವು ಹೊರಡುವ ಮೊದಲು ನಿನ್ನನ್ನು ಕಂಡು, ನಿನಗೆ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಬೇಕೆಂದು ಬಂದಿದ್ದೇವೆ. ನೀನು ಸರ್ವಥಾ ಚಿಂತೆ ಮಾಡಬೇಡ. ಈಗ ನೀನು ಸೋತು ನಡೆಯುವದರಿಂದ ಸ್ವಲ್ಪ ಹಾನಿಯಿದ್ದರೂ, ಮುಂದೆ ಎಲ್ಲ ನಿನ್ನ ಮನಸ್ಸಿನಂತೆಯೇ ಆಗುವದು. ಶಿವಬಾ, ತೀರ್ಥಾಟನೆ ಮಾಡುವ ಪ್ರಸಂಗವು ನಿನಗೆ ಬರಲಿಕ್ಕಿಲ್ಲವೆಂದಾದರೂ ಹ್ಯಾಗೆ ಹೇಳಬೇಕು? ಮುಂದೆ ಏನಾದೀತೆಂಬ ಚಿಂತೆಯಿಂದ ನೀನು ಸುಮ್ಮನೆ ಕೊರಗಬೇಡ. ದಾಶರಥಿ ರಾಮನ ಕೃಪೆಯು ನಿನ್ನ ಮೇಲೆ ಸಂಪೂರ್ಣವಾಗಿ ಇರುವದರಿಂದ, ಎಲ್ಲ ಕಾರ್ಯಗಳಲ್ಲಿ ನೀನು ಪೂರ್ಣ ಯಶಸ್ವಿಯಾಗುವೆ ನಾಲ್ಕುದಿನ ಆತನಿಗೆ ವನವಾಸ ಭೋಗಿಸುವ ಪ್ರಸಂಗ ಒದಗಿದಂತೆ, ನಿನಗೆ ಈಗ ಒದಗಿದರೆ ತಪ್ಪೇನು ? ನಿನ್ನಂಥ ವಿಭೂತಿಗೆ ಗೃಹವಾಸವೇನು? ವನವಾಸವೇನು? ಎರಡೂ ಅಷ್ಟೇ. ಇನ್ನು ಸಾಕು, ಹೆಚ್ಚು ವಿಚಾರ ಮಾಡುತ್ತ ಕಾಲಹರಣ ಮಾಡುವಲ್ಲಿ ಅರ್ಥವಿಲ್ಲ. ಇನ್ನು ನಾವು ಹೊರಡುವೆವು.

ಈ ವರೆಗೆ ಜಿಜಾಬಾಯಿಯವರು ಸುಮ್ಮನೆ ಕುಳಿತಿದ್ದರು. ಸಮರ್ಥರ ಈ ನಿರ್ಧಾರದ ಮಾತುಗಳನ್ನು ಕೇಳಿ ಅವರು ಸಥಿಯಿಂದ "ಕೃಪಾವಂತಾ, ಸದ್ಗುರೂ, ವ್ಯರ್ಥ ಕಾಲಹರಣ ಮಾಡಬೇಕೆಂದು ಯಾರು ಹೇಳುವರು? ಆದರೆ ಇಷ್ಟು ದಿವಸ ಪಟ್ಟ ಶ್ರಮವೆಲ್ಲ ವ್ಯರ್ಥವಾಗುವ ಲಕ್ಷಣತೋರಿದಾಗ ಯಾರಿಗೆ ವ್ಯಸನವಾಗಲಿಕ್ಕಿಲ್ಲ? ನಮ್ಮ ಕಾರ್ಯದಲ್ಲಿ ವಿಘ್ನ ಬರುವದನ್ನು ಆ ರಘುವೀರನಾದರೂ ನೋಡಿ ಸುಮ್ಮನೆ ಯಾಕೆ ಇರುವನು ಅಂಬಾಬಾಯಿಯು ದೃಷ್ಟಾಂತದಿಂದ ಸೂಚಿಸುವ ವಿಘ್ನಗಳನ್ನಾದರೂ ಆಕೆಯು ಯಾಕೆ ಒದಗಗೊಡುವಳು? ಎಂಬ ವಿಚಾರವು ಕ್ಷಣಮಾತ್ರ ಮನಸ್ಸಿನಲ್ಲಿ ಬಂದರೆ ಆಶ್ಚರ್ಯವೇನು? ಮಹಾರಾಜ, ಈಗ ಎರಡು ತಿಂಗಳಾಯಿತು; ನಮ್ಮ ಶಿವಬಾನು ಸಮಾಧಾನದಿಂದ ಊಟವನ್ನು ಸಹ ಮಾಡಿರುವದಿಲ್ಲ. ಅಂಥದರಲ್ಲಿ ಈಗ ಒಪ್ಪಂದದ ಪ್ರಸಂಗವು ಬಂದೊದಗಿರುತ್ತದೆ; ಅಂದಬಳಿಕ ಶಿವಬಾನ ಜೀವಕ್ಕೆ ಎಷ್ಟು ವ್ಯಥೆಯಾಗಬೇಡ ? ಆದರೆ ತಾವೂ ಒಪ್ಪಂದ ಮಾಡಿಕೊಳ್ಳೆಂದೇ ಹೇಳುವಿರಿ; ಅಂಬಾಬಾಯಿಯೂ ಒಪ್ಪಂದ ಮಾಡಿಕೊಳ್ಳೆಂದೇ ಹೇಳುವಳು; ಅಂದಬಳಿಕ ಎರಡನೆಯ ಮಾರ್ಗವೇನಿರುವದು? ತಾವು ಹೇಳಿದಂತೆಯೇ ಮಾಡುವೆವು. ತಾವು ಹ್ಯಾಗೂ ತೀರ್ಥಾಟನಕ್ಕೆ ಹೊರಡಲು ನಿಶ್ಚಯಿಸಿರುವಿರಿ; ಅಂದಬಳಿಕ ಒಮ್ಮೆ ಇದರ ವ್ಯವಸ್ಥೆಯನ್ನಾದರೂ ಮಾಡಿ ಹೋಗಿರಿ " ಎಂದು ಸ್ಪಷ್ಟವಾಗಿ ಹೇಳಲು, ಸಮರ್ಥರು ನಕ್ಕು-"ತಾಯಿಯ ಕರಳು ಹೀಗೆ ಮರುಗತಕ್ಕದ್ದೇ ಸರಿ. ನಾವೂ ಮರುಗುವೆವು. ಜಿಜಾಬಾಯಿ, ಶಿವಬಾನು ಹ್ಯಾಗೆ ನಿನ್ನವನೋ ಹಾಗೆ ನನ್ನವನೂ ಇರುತ್ತಾನೆ. ಆತನು ಎಲ್ಲ ವಿಷಯಗಳಲ್ಲಿ ನಿಷ್ಣಾತನಿರುವನು ಆತನಿಗೆ ಕಾಲಕಾಲಕ್ಕೆ ತಕ್ಕ ಪ್ರೇರಣೆಯನ್ನು ರಘುವೀರನು ಮಾಡೇ ಮಾಡುವನು. ಆದರ ವಿಷಯವಾಗಿ ನನಗೂ ನಿನಗೂ ಇಬ್ಬರಿಗೂ ಯೋಚನೆ ಬೇಡ. ರಘುನಾಥಪಂತರು

ಒಳ್ಳೇ ಮುತ್ಸದ್ದಿಗಳು. ಅವರ ಮಾತಿನಲ್ಲಿ ಸ್ವಾರಸ್ಯ ಬಹಳ. ಅವರನ್ನು ಜಯಸಿಂಗನ ಕಡೆಗೆ ಕಳಿಸಿ ಒಡಂಬಡಿಕೆಯ ಕರಾರುಗಳನ್ನು ಕೇಳಿಕೊಂಡು ಅದರಂತೆ ಶಿವಬಾನು ನಡೆಯಲಿ. ಜಯಸಿಂಗನು ನಮಗೆ ಅನುಕೂಲವಾಗಬಹುದಾಗಿದ್ದರೂ, ದಿಲೇರಖಾನನು ಅದಕ್ಕೆ ಹರಿಗೊಡಲಿಕ್ಕಿಲ್ಲೆಂಬದನ್ನು ಮರೆಯಲಾಗದು. ದಿಲೇರಖಾನನ ಮಾತನ್ನು ಮೀರಿ ಹೋಗಲಿಕ್ಕೆ ಜಯಸಿಂಗನಿಗೆ ಬರುವಹಾಗಿಲ್ಲ. ಸತ್ಯ ಸಂಕಲ್ಪವು ತಪ್ಪಲಾರದು. ಹ್ಯಾಗಿದ್ದರೂ ಕಡೆಯ ಪರಿಣಾಮವು ಹಿತಕರವಾಗುವದು. ನಾವು ತೀರ್ಥಾಟನೆಗೆ ಹೋದರೇನು? ಎಲ್ಲಿ ಇದ್ದರೇನು? ನಮ್ಮ ಮನಸ್ಸೆಲ್ಲ ಶಿವಬಾನಲ್ಲಿ ಹಾಗೂ ಆತನು ಆರಂಭಿಸಿರುವ ಕಾರ್ಯದಲ್ಲಿ! ಪುನಃ ಪುನಃ ನಾವು ನಂಬಿಗೆಯಿಂದ ಹೇಳುವೆವು; ಕಡೆಗೆ ಶಿವಬಾನ ಕಲ್ಯಾಣವಾಗುವದು. ಇದು ನಮ್ಮ ಪೂರ್ಣವಾದ ಆಶೀರ್ವಾದವೆಂದು ತಿಳಿಯತಕ್ಕದ್ದು" ಎಂದು ನುಡಿದು, ಶಿವಬಾನ ಮಸ್ತಕದ ಮೇಲೆ ವರದ ಹಸ್ತವನಿಟ್ಟು ಒಮ್ಮೆ ಆತನ ಕಡೆಗೂ, ಒಮ್ಮೆ ಜಿಜಾಬಾಯಿಯವರ ಕಡೆಗೂ ನೋಡಿ ನಕ್ಕರು; ಮತ್ತು ನೋಡ ನೋಡುತ್ತ ಅವರು ಬಂದಂತೆ ಹೊರಟು ಹೋಗಿಬಿಟ್ಟರು!

— ವೇ. ತಿ. ಗಳಗನಾಥ



# ಪರಿಚಯ

ದಿವಂಗತ **ವೆಂಕಟೇಶ ತಿರಕೋ ಕುಲಕರ್ಣಿ** (ಗಳಗನಾಥ) ಯವರನ್ನರಿಯದ ಕನ್ನಡಿಗರು ವಿರಳ ಕನ್ನಡ ಕಾದಂಬರೀ ಪ್ರಪಂಚವು ಇವರಿಂದಲೇ ಪ್ರಾರಂಭವಾಯಿತೆಂದರೂ ತಪ್ಪಾಗದು. ಮೈಸೂರತ್ತ ದಿವಂಗತ ಬಿ. ವೆಂಕಟಾಚಾರ್ಯರೂ ಧಾರವಾಡದಲ್ಲಿ ಗಳಗನಾಥರೂ, ಬಾಗಿಲುಕೋಟೆಯಲ್ಲಿ ಕೆರೂರ ವಾಸುದೇವಾಚಾರ್ಯರೂ ಕನ್ನಡ ಕಾದಂಬರಿಯ ಆದ್ಯಪ್ರವರ್ತಕರಾಗಿದ್ದಾರೆ. ಒಬ್ಬರೊಬ್ಬರ ಶೈಲಿಯೂ ಒಂದೊಂದು ವೈಶಿಷ್ಟ್ಯವನ್ನು ಪಡೆದಿದೆ. ಸದ್ಗ್ರಂಥಮಾಲೆಯೆಂದು ಗಳಗನಾಥರು ತಮ್ಮ ಗ್ರಂಥ ಮಾಲೆಯನ್ನು ಸಾರ್ಥಕವಾಗಿ ಕರೆದಿದ್ದಾರೆ. ಅವರ ಶೈಲಿ ಸುಲಭವಾಗಿ ಸುಂದರವಾಗಿದ್ದು ಶಕ್ತಿಯುತವಾಗಿದೆ ಅನೇಕ ಕಾದಂಬರಿಗಳನ್ನು ಮರಾಠಿಯಿಂದ ಅನುವಾದಿಸಿದ್ದರೂ ಸ್ವತಂತ್ರವೊ ಎನ್ನುವಂತೆ ತೋರುತ್ತಿರುವುದು ಅವರ ತಿಳಿಯಾದ ಶೈಲಿಯ ಪ್ರಭಾವದಿಂದ. ಛತ್ರಪತಿ, ಕ್ಷಾತ್ರತೇಜ, ಕಮಲಕುಮಾರಿ ಮೊದಲಾದವುಗಳು ಅನುವಾದಗಳಲ್ಲಿ ಮುಖ್ಯವಾದವುಗಳು. ಮಾಧವ ಕರುಣವಿಲಾಸ, ಪ್ರಬುದ್ಧ ಪದ್ಮನಯನೆ, ಕುಮುದಿನಿ ಇವು ಇವರ ಸ್ವತಂತ್ರ ಕಾದಂಬರಿಗಳು. ಕೇವಲ ಕಾದಂಬರಿಗಳನ್ನಲ್ಲದೆ, ನೀತಿ, ಪುರಾಣ, ವೇದಾಂತ ಮೊದಲಾದ ಗಹನ ವಿಷಯಗಳಮೇಲೆಯೂ ಗ್ರಂಥಗಳನ್ನು ಇವರು ಬರೆದಿದ್ದಾರೆ. ಶೇಷಾಚಲ ಸದ್ಗುರು ಪಾಠಶಾಲೆಯನ್ನು ನಡೆಸಲು ತಮ್ಮ ಗ್ರಂಥಗಳಿಂದ ಬರುವ ಉತ್ಪನ್ನವನ್ನೆಲ್ಲ ಅರ್ಪಿಸಿ, ಸಾಲಕ್ಕೂ ಕೂಡ ಸೋಲದೆ ತಮ್ಮ ಜೀವನವನ್ನು ಪುಣ್ಯಮಯವಾಗಿ ಮಾಡಿ ಪುಣ್ಯ ಚರಿತರಾಗಿ

ಗಿದ್ದಾರೆ. ಕನ್ನಡ ಅಭ್ಯಾಸಿಗಳೆಲ್ಲ ಇವರ ಎಲ್ಲ ಗ್ರಂಥಗಳನ್ನು ಓದಲೇ ಬೇಕು.

ಇಲ್ಲಿ ಆಯ್ದುಕೊಂಡ ಭಾಗವು ಇವರ '**ಛತ್ರಪತಿ**'ಕಾದಂಬರಿಯಲ್ಲಿಯದು.

**ಕಥಾಸಂದರ್ಭ:—**

ಛತ್ರಪತಿ ಶಿವಾಜಿಯು ಅಫಜುಲಖಾನನು ಒಡ್ಡಿದ ಕುತಂತ್ರದಿಂದ ಪಾರಾಗಿ ಸಮರ್ಥ ರಾಮದಾಸ ಸ್ವಾಮಿಗಳನ್ನು ನಮಸ್ಕರಿಸಿದನು. ಶ್ರೀ ಸಮರ್ಥರು ಶಿವಬಾಗೆ ಆಶೀರ್ವದಿಸಿ ಸ್ವದೇಶೋದ್ಧಾರದ ಕಾರ್ಯವನ್ನು ಮುಂದೆ ಸಾಗಿಸಲು ಸಿದ್ಧನಾಗಬೇಕೆಂದು ಆಜ್ಞಾಪಿಸಿದರು. ಆ ವೇಳೆ ಶ್ರೀ ಸಮರ್ಥರು ಔರಂಗಜೇಬ ಬಾದಶಹನು ಶಿವಬನನ್ನು ರಸಾತಳಕ್ಕೆ ಮೆಟ್ಟಲು ಒಳಸಂಚು ಮಾಡಿದ ಸಂಗತಿ ಹೇಳಿ, ದೇಹವಿರುವವರೆಗೆ ಹಿಡಿದ ಕಾರ್ಯ ನೆರವೇರಬೇಕೆಂದು ಹೇಳಿದರು. ಅವರ ಉತ್ಸಾಹಜನಕ ಬೋಧದಿಂದ ಶಿವಾಜಿಯ ಮನಸ್ಸಿನ ದೌರ್ಬಲ್ಯವು ಅಳಿಯಿತು. ಆ ನಂತರ ಶಿವಬಾನು ಸಮರ್ಥರನ್ನು ಪ್ರತಾಪಗಡಕ್ಕೆ ಕರೆದುಕೊಂಡು ಹೋದನು. ಅಲ್ಲಿ ಸಮರ್ಥರು ಜಿಜಾಬಾಯಿ ಮೊದಲಾದವರ ಸಮ್ಮುಖದಲ್ಲಿ ಶಿವಬಾಗೆ ಬರಬಹುದಾದ ಮುಂದಿನ ಗಂಡಾಂತರವನ್ನು ಸೂಚಿಸಿ ಆ ಗಂಡಾಂತರದಿಂದ ಪಾರಾಗುವಂತೆ ಆಶೀರ್ವದಿಸಿದರು

ಶಿವಾಜಿಯು ಔರಂಗಜೇಬನು ಕಳಿಸಿದ ಅಫಜುಲಖಾನನನ್ನು ಕೊಲ್ಲಲು, ಬಾದಶಹನು ಜಸವಂತಸಿಂಗನೆಂಬ ಬಲಾಢ್ಯ ಸರದಾರನನ್ನು ಕಳಿಸಿದನು. ಆದರೆ ಮಹಾರಾಜನು ಅವನನ್ನು ತನ್ನೆಡೆಗೆ ಎಳೆದುಕೊಂಡನು. ಇದನ್ನರಿತು ಔರಂಗಜೇಬನು ತನ್ನ ಆಶ್ರಿತರಲ್ಲಿ ಒಬ್ಬನಾದ ಬಹು ಬಲಿಷ್ಠನಾದ ರಾಜಾ ಜಯಸಿಂಗನೆಂಬ ರಜಪೂತ ಸರದಾರನನ್ನು ಶಿವಾಜಿಯನ್ನು ಬಗ್ಗು ಬಡಿಯಲು ಬಹು ದೊಡ್ಡ ಸೈನ್ಯದೊಂದಿಗೆ ಕಳಿಸಿದನು. ಜಯಸಿಂಗನು ಬಹು ದೂರದರ್ಶಿಯೂ ಮುತ್ಸದ್ದಿಯೂ ಆಗಿದ್ದನು. ಆದುದರಿಂದಲೇ ಅವನು ಪುಣೆಯಲ್ಲಿ ಬೀಡುಬಿಟ್ಟು ಸ್ವಲ್ಪದಿನಗಳಲ್ಲಿಯೇ ಶಿವಾಜಿಯ ಎಷ್ಟೋ ಜನರನ್ನು ತನ್ನೆಡೆಗೆ ಸೆಳೆದುಕೊಂಡನು.

ಔರಂಗಜೇಬನ ಇನ್ನೊಬ್ಬ ಸೇನಾನಾಯಕನಾದ ದಿಲೇರಖಾನನಿಗೆ ಪುರಂದರ ದುರ್ಗಕ್ಕೆ ಮುತ್ತಿಗೆ ಹಾಕಲು [illegible] ಹೇಳಿದನು. ಇತ್ತ ದಿಲೇರಖಾನನು [illegible] ರುವಾಗ ಇತ್ತ ಶಿವಾಜಿಯು ದಂಡಿನ [illegible] ಲೂಟಿ ಮಾಡಿದನು. [illegible] ಕೇಳಿ ಸಿಟ್ಟಿಗೆ ಮರಾಠರ ರುದ್ರಮಾಲ, [illegible]ಗಡ, ಪುರಂದರ [illegible] ಲಾದ ಕೋಟೆಗಳನ್ನು ವಶಪಡಿಸಿಕೊಳ್ಳಲು ಸಿದ್ಧನಾಗಿ, ಈ ಕೋಟೆಗಳ ಸುತ್ತಲಿನ ಪ್ರದೇಶಕ್ಕೆ ನಾಶವನ್ನುಂಟುಮಾಡಿದನು. ಈ ಪ್ರದೇಶದ ಜನಹಾನಿ ಹಾಗು ಧನಹಾನಿ ಆದುದನ್ನು ನೋಡಿ ಶಿವಾಜಿಯು ಚಿಂತೆಗೊಳಗಾದನು. ಬಹು ಕಷ್ಟದಿಂದ ಕಟ್ಟಿದ ಸ್ವರಾಜ್ಯವು ಉರುಳಿ [illegible] ಬೀಳುವ ಲಕ್ಷಣವು ತೋರಿ ಶಿವಾಜಿಗೆ ಪರಮಾವಧಿ ವ್ಯಸನವಾಯಿತು. ಈ ತಿಕ್ಕಾಟದಲ್ಲಿ ಶಿವಾಜಿಯು ಬಲಗೈಯಂತಿದ್ದ ಮುರಾರಬಾಜಿಯು ಪುರಂದರಕೋಟೆಯನ್ನು ರಕ್ಷಿಸುವಾಗ ಹತನಾದನು. [illegible] ಮಹಾಗಂಡಾಂತರವು ಮುಸುಕಿತು. ನಾಲ್ಕೂ ದಿಕ್ಕಿನಿಂದ ನಿರಾಶಾಜನಕ ಸುದ್ದಿಗಳೇ ಶಿವಾಜಿಗೆ ಕೇಳಬರುತ್ತಿರಲು ರಾಯಗಡದಲ್ಲಿದ್ದ ಮಹಾರಾಜರು ಭವಾನಿಯ ದರ್ಶನಕ್ಕೆಂದು ಪ್ರತಾಪಗಡಕ್ಕೆ ಹೊರಟರು. ಅಲ್ಲಿಗೆ ಹೋದಮೇಲೆ ತಾಯಿಯು ಜೊತೆಯಾಗಿ ಭವಾನಿಯ ದರ್ಶನಕ್ಕೆ ಶಿವಬಾನು ಹೋದನು. ಅಲ್ಲಿ ಅವನಿಗೆ ಘೋರ ಸ್ವಪ್ನವೊಂದು ಬಿದ್ದಿತು. ಅದರಿಂದ ವಿಲಕ್ಷಣವಾದ ಚಿಂತೆಯು ಶಿವಬಾನನ್ನು ಆವರಿಸಿತು. ಮಗನನ್ನು ಊಟಕ್ಕೆ ಕರೆದುಕೊಂಡು ಹೋಗಲು ಬಂದ ಜಿಜಾಬಾಯಿಯು, "ಇಂದು ಅಂಬಾ ಭವಾನಿಯ ಮೇಲಿನ ನಿನ್ನ ವಿಶ್ವಾಸವು ಸ್ವಲ್ಪ ಕಡಿಮೆಯಾದಂತೆ" ಎಂದು ನುಡಿಯುತ್ತಿರಲು, ಮಹಾರಾಜರು ನಡುವೇ ಬಾಯಿ ಹಾಕಿ—"ಛೆ ಛೆ. ಆಯೀಸಾಹೇಬ, ಹೀಗೆ ತಾವು ಸ್ವಪ್ನದಲ್ಲಿ ಕೂಡ ಎಣಿಸಲಾಗದು. ಅಂಬಾಬಾಯಿಯು ಮೇಲಿನ, ಹಾಗು ಶ್ರೀ ಸಮರ್ಥರ ಮೇಲಿನ ನನ್ನ ವಿಶ್ವಾಸವು ಸ್ವಲ್ಪವೂ ಕಡಿಮೆಯಾಗಲಾರದು. ಅವರಿಬ್ಬರ ಮೇಲಿನ ಶ್ರದ್ಧೆಯೇ [illegible] ಸ್ವರಾಜ್ಯದ ಜೀವವಾಗಿರು ..." ಹೀಗೆ ನುಡಿಯುತ್ತಿರಲು,—"ಅಂತೇ ಎಷ್ಟು ಸಂಕಟಗಳೊದಗಿದರೂ, ಎಷ್ಟು ಸೋತು ನಡೆಯಬೇಕಾದರೂ ಕಡೆಗೆ ನಿನಗೆ ವಿಜಯವೇ ಆಗುವುದು" ಎಂಬ ಗಂಭೀರಧ್ವನಿಯು ಕೇಳಿಸಿತು. ಅವರೆಲ್ಲರು ಚಕಿತರಾಗಿ ನೋಡಲು ಶ್ರೀ ಸಮರ್ಥರ ದಿವ್ಯ ಮೂರ್ತಿಯ ದರ್ಶನವು ಅವರಿಗಾಯಿತು. ಈ ದರ್ಶನದ ಪ್ರಸಂಗದ ವರ್ಣನೆಯೆ ಪಾಠದ ವಿಷಯವು.

# ಅಭ್ಯಾಸ

## ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ

(೧) ಸಮರ್ಥರು ಖಿನ್ನನಾಗಿ ಕುಳಿತ ಶಿವಾಜಿಗೆ ಯಾವ ಸಲಹೆ ಕೊಟ್ಟರು ?

(೨) ಜಹಾಂಗೀರನು ಎಂಥ ಸ್ವಭಾವದವನಿರುವನೆಂದು ಸಮರ್ಥರು ಹೇಳುತ್ತಾರೆ ?

(೩) ಗುರುವಿನ ವಿಯೋಗವಾಗುವುದನ್ನು ಕೇಳಿ ಮಹಾರಾಜರಿಗೆ ವಿಷಾದವಾಗಲು ಕಾರಣವೇನು ? ಅದಕ್ಕೆ ಅವರು ಮಹಾರಾಜರಿಗೆ ಹೇಗೆ ಸಮಾಧಾನ ಹೇಳಿದರು ?

(೪) ಸಮರ್ಥರ ನಿರ್ಧಾರದ ಮಾತುಗಳನ್ನು ಕೇಳಿ ಜಿಜಾಬಾಯಿಯವರು ಏನಂದರು ?

(೫) ಜಿಜಾಬಾಯಿಯವರು ಎಂಥ ವ್ಯಕ್ತಿಯೆಂದು ನಿಮಗೆ ಕಂಡು ಬರುವುದು ?

(೬) ಗುರುವು ಯಾವ ಅನುಗ್ರಹವನ್ನು ಶಿವಾಜಿಗೆ ಮಾಡಿದನು !

(೭) ಯುಕ್ತಿವಂತರಾಗಿದ್ದ ರಾಜಕಾರಣಪಟುಗಳಾದವರ ಹೆಸರುಗಳು ನಿಮಗೆ ಗೊತ್ತಿದ್ದಲ್ಲಿ ಹೇಳಿರಿ.

## ಸ್ಪಷ್ಟೀಕರಿಸಿರಿ.—

(೧) ಕಾರ್ಯಾರ್ಥಿಯು ಬಿಸಿಲು ಬಂದತ್ತ ಕೊಡೆಯನ್ನು ಹಿಡಿಯಬೇಕಾಗುವದು.

(೨) ನಿನ್ನಂಥ ವಿಭೂತಿಗೆ ಗೃಹವಾಸವೇನು, ವನವಾಸವೇನು !

(೩) ತಾಯಿಯ ಕರುಳು ಹೀಗೆ ಮರುಗತಕ್ಕದ್ದೇ ಸರಿ.

## ವ್ಯಾಕರಣ:—

**(ಅ) ಕೆಳಗಿನ ಸಮುಚ್ಚಯಗಳನ್ನು ಸೇರಿಸಿ ಒಂದೊಂದು ಸಂಯುಕ್ತ (Compound) ವಾಕ್ಯಮಾಡಿರಿ:-**

ಮತ್ತು, ಬಳಿಕ, ಊ. ಆದರೆ, ಆದ್ದರಿಂದ, ಇಲ್ಲವೆ

(೧) ಬಡತನವು ನನ್ನ ಧೈರ್ಯವನ್ನು ಕುಂದಿಸಲಿಲ್ಲ; ಬಳಲಿಕೆಯು ನನ್ನ ಧೈರ್ಯವನ್ನು ಹೆಚ್ಚಿಸಿತು

(೨) ನೀನು ಆರಂಭಿಸಿದ ಕಾರ್ಯದ ಗೌರವವನ್ನು ಜಯಸಿಂಗನು ತಿಳಿದುಕೊಂಡಿಲ್ಲ, ತಿಳಿದುಕೊಳ್ಳುವ ಇಚ್ಛೆಯೂ ಅವನಿಗಿಲ್ಲ

(೩) ನಿನಗೆ ಕೇಡಾಗಬೇಕೆಂದು ಆತನ ಮನಸ್ಸಿನಲ್ಲಿ ಇರುವದಿಲ್ಲ; ತಾನು ಬಂದ ಕಾರ್ಯವು ಮೊದಲು ಈಡೇರಬೇಕೆಂದು ಇಚ್ಛಿಸುತ್ತಿರಬೇಕು

(೪) ಶ್ರೀರಾಮನಿಗೂ ವನವಾಸವು ತಪ್ಪಲಿಲ್ಲ; ನಮ್ಮ ಪಾಡೇನು ?

(೫) ನಾವು ದುಡಿಯುವೆವು, ಪಡೆಯುವೆವು

(೬) ನಾವು ಯಾವಾಗ ಅದೃಶ್ಯರಾದೇವು ಎಂಬ [illegible]ವಿಲ್ಲ; ನಿನಗೆ ತಿಳಿಸದೇ ನಾವು ಅದೃಶ್ಯರಾಗುವದಿಲ್ಲ

## (ಬ) ಕೆಳಗಿನ ನಾಣ್ಣುಡಿಗಳನ್ನು ಪೂರ್ಣಮಾಡಿರಿ:—

(೧) ಹುಟ್ಟಿಸಿದ ದೇವರ ... ... ...

(೨) ನೆಚ್ಚಿದ ಎಮ್ಮೆ... ... ...

(೩) ಬೇವಂ ಮೆಚ್ಚಿದೆ ಕಾಗೆಗೆ.........

(೪) ಆಡದೇ ಮಾಡುವವನು... . .

(೫) ಒಲಿದರೆ ನಾರಿ... .. ..

(೬) ಬಿಲ್ಲ ಕಂಬಿಯು ಡೊಂಕು.. . .

## (ಕ) ಕೆಳಗಿನ ಸಮ್ಮಿಶ್ರ ವಾಕ್ಯಗಳನ್ನು ವಿಭಜಿಸಿರಿ:—

(೧) ಯಾವಾಗಲೂ ಶಕ್ತಿಯಿಂದಲೇ ಕಾರ್ಯವು ಸಾಧಿಸುತ್ತದೆಂದು ತಿಳಿಯಬೇಡ.

(೨) ಇಂಥ ವಿಪತ್ಕಾಲದಲ್ಲಿ ಶ್ರೀ ಗುರುವಿನ ವಿಯೋಗವಾಗುವುದೆಂಬುದನ್ನು ಕೇಳಿ ಮಹಾರಾಜರಿಗೆ ಪರಮ ವಿಷಾದವಾಯಿತೆಂದು ಹೇಳಿದರು.

---

# ೭. ಸದ್ವರ್ತನ

ಈ ಪ್ರಪಂಚದಲ್ಲಿ ಶ್ರೇಯೋಭಿವೃದ್ಧಿಯನ್ನು ಪಡೆಯಬೇಕಾದರೆ ಒಳ್ಳೇ ನಡತೆಯು ಮುಖ್ಯವಾಗಿದೆ. ಹಣವಾಗಲೀ ಅಧಿಕಾರವಾಗಲಿ, ಜಾಣತನವಾಗಲಿ, ಇಲ್ಲದಿದ್ದರೆ ಸಾಗಬಹುದು, ಆದರೆ ಒಳ್ಳೇ ನಡತೆಯನ್ನು ಇಟ್ಟುಕೊಳ್ಳದಿದ್ದರೆ ಸಾಗುವದಿಲ್ಲ. ಮನುಷ್ಯರ ಯೋಗ್ಯತೆಯು ಅವರ ನಡತೆಯ ಮೇಲಿಂದಲೇ ಪರೀಕ್ಷೆಯಾಗುವದು. ಶ್ರೀಮಂತಿಕೆಗೂ ಅಧಿಕಾರಕ್ಕೂ ಬಿರುದಾವಳಿಗೂ ಬೆಲೆ ಇಲ್ಲಿ ಹೊರಗೆ ತೋರುವ ಸೌಖ್ಯಗಳಿಗೂ ಆಡಂಬರಗಳಿಗೂ ಬೆಲೆ ಇಲ್ಲ ಕೆಲವರು ಹೀನವಾದ ಉಪಾಯಗಳಿಂದ ಹಣವನ್ನು ಗಳಿಸಿ ಆನೆ ಅಂಬಾರಿಗಳ ಮೇಲೆ ಕುಳಿತು, ಛತ್ರಚಾಮರಗಳನ್ನು ಹಿಡಿಸಿಕೊಂಡು ಮೆರೆಯಬಹುದು. ಕೆಲವರು ಮಾರೆಮೋಸಗಳಿಂದಲೂ ಚಾಡಿ ಮುಖಸ್ತುತಿಗಳಿಂದಲೂ ಅಧಿಕಾರವನ್ನೂ ಬಿರುದಾವಳಿಯನ್ನೂ ದೊರಕಿಸಬಹುದು. ಆದರೆ ಅದೆಲ್ಲ ಅಸ್ಥಿರವಾದ ಆಸ್ತಿಯು. ಅದಕ್ಕೆ ಕೆಲವು ಕಾಲ ತೇಲು, ಕೆಲವು ಕಾಲ ಮುಳುಗು ಉಂಟು. ಆದರೆ ಒಳ್ಳೇ ನಡತೆಗೆ ಎಂದಿಗೂ ಮುಳುಗು ಇಲ್ಲ. ಒಳ್ಳೇ ನಡತೆಯುಳ್ಳ ಮನುಷ್ಯರು, ನೀರಿನಲ್ಲಿ ಬೆಂಡು ತೇಲಾಡುವಂತೆ ಸಂಸಾರ ಕಡಲಿನೊಳಗೆ ತೇಲಾಡುವರು.

ನಾವೆಲ್ಲರೂ ಕವಿಗಳೂ, ಗಾಯಕರೂ, ಶಿಲ್ಪ-ಶಾಸ್ತ್ರಜ್ಞರೂ ರಸಾಯನ-ಶಾಸ್ತ್ರಜ್ಞರೂ ಆಗಲಾರೆವು. ಆದರೆ ಜಗತ್ತಿನಲ್ಲಿ ಎಲ್ಲರಿಗೂ ದೊರಕಿಸಲು ಸಾಧ್ಯವಾಗಿರುವ ಕೆಲವು ಗುಣಗಳುಂಟು. ಅವು ಯಾವವೆಂಬುವದು ಗೊತ್ತುಂಟೋ? ಸತ್ಯ, ನಿಷ್ಕಾಪಟ್ಯ,

ಪರೋಪಕಾರ, ಕಷ್ಟಸ್ಸೈರಣೆ, ಅಧಿಕ ಪ್ರೀತಿ ತ್ಯಾಗ, ಅಲ್ಪಕಾರ್ಯ ತ್ಯಾಗ ಮತ್ತು ಔದಾರ್ಯ. ದುಡಿಯದೆ ಇದ್ದರೆ ಶಕ್ತಿಯಿಲ್ಲ ವೆಂಬ ನೆವ ಹೇಳಬಹುದು. ವಿದ್ಯೆ ಇಲ್ಲದಿದ್ದರೆ ತಂದೆ-ತಾಯಿಗಳು ಕಲಿಸಲಿಲ್ಲವೆಂಬ ನೆವ ಹೇಳಬಹುದು. ಅಧಿಕಾರ ಮರ್ಯಾದೆಗಳು ದೊರಕದಿದ್ದರೆ ದೈವವನ್ನು ಹಳಿಯಬಹುದು. ಆದರ ಒಳ್ಳೆ ನಡತೆಯಲ್ಲಿ ಸಮಾವೇಶವಾಗಿರುವ ಮೇಲ್ಕಂಡ ಗುಣಗಳು ನಮ್ಮ ಕೈಯಲ್ಲಿಯೇ ಉಂಟು ಅವು ಇಟ್ಟುಕೊಂಡರೆ ಇರುವವು, ಇಲ್ಲ ದಿದ್ದರೆ "ಅಪ್ಪಗಳಿರಾ, ನಿಮ್ಮ ಮಾರ್ಗವನ್ನು ನೀವು ನೋಡಿ ಕೊಳ್ಳಿರಿ" ಎಂದು ಸಿಟ್ಟಿನಿಂದ ಶಾಪಕೊಟ್ಟು ಹೊರಟುಹೋಗುವವು.

ಒಳಿತು ಹೀನಗಳು ಯಾವವು? ನ್ಯಾಯ ಅನ್ಯಾಯಗಳು ಯಾವವು? ಎಂಬದನ್ನು ನಮ್ಮ ಸ್ವಂತ ಮನಸ್ಸಿಗೆ ವಿಚಾರಿಸಿದರೆ ಅದು ತಾನೇ ಹೇಳುತ್ತದೆ. ಅದನ್ನು ಕೇಳಿಕೊಂಡು ಸುಮ್ಮನೆ ಕುಳಿತುಕೊಳ್ಳಬಾರದು. ಅದರಂತೆ ತಮ್ಮ ನಡತೆಯನ್ನು ಇಡ ಬೇಕು ಕಷ್ಟಪಟ್ಟು ವಿದ್ಯೆಯನ್ನೂ, ಉದ್ಯೋಗವನ್ನೂ ಬೆಳಸ ಬೇಕು ಹೆಚ್ಚಿನ ಜ್ಞಾನವನ್ನು ಸಂಪಾದಿಸಿ, ಹೆಚ್ಚಿನ ಸ್ಥಿತಿಯನ್ನು ಪಡೆದು, ಹೆಚ್ಚಿನ ಕೃತಿಯನ್ನು ಮಾಡುವದೇ ನಮ್ಮ ಕರ್ತವ್ಯವು. ವಿದ್ಯೆ ನೀತಿಗಳಿಂದ ಮುಂದರಿಸಲಿಕ್ಕೆ ಹವಣಿಸದೆ ಇರುವವರು ಪಶುಗಳು ಆದರೆ ಉದ್ಯೋಗ ಮಾಡುವಾಗ ಯಾರೂ ತಮ್ಮ ಶಕ್ತಿಗೂ ಯೋಗ್ಯತೆಗೂ ಮೀರಿದ ಆಲೋಚನೆಗಳನ್ನು ಮಾಡುತ್ತ ದುರಾಶೆಯಿಂದ ಕುದಿಯಬಾರದು. ಹಾಗೂ ಅಂಥ ಆಲೋಚನೆ ಗಳನ್ನು ಕೊನೆಗಾಣಿಸಲಿಕ್ಕೆ ಅನ್ಯಾಯದ ಮಾರ್ಗವನ್ನು ಅವ ಲಂಬಿಸಬಾರದು

ಜನರೊಳಗೆ ಅಥವಾ ಮನಸ್ಸಿನೊಳಗೆ ನಾಚಿಕೆಯಾಗುವಂಥ ಕೆಲಸಗಳನ್ನು ಎಂದಿಗೂ ಮಾಡಬಾರದು ಜನರೊಳಗೆ ಮೋರೆ ಎತ್ತಿಕೊಂಡು ಅಡ್ಡಾಡುವಂಥ ಮತ್ತು ಎಲ್ಲರಿಂದ ಸೈ ಅನ್ನಿಸಿ

ಕೊಳ್ಳುವಂಥ ಕೆಲಸಗಳನ್ನೇ ಮಾತ್ರ ಮಾಡಬೇಕು. ಸುಳ್ಳು ಪ್ರಸಿದ್ಧಿಯೂ ಜೊಳ್ಳು ಮರ್ಯಾದೆಯೂ ಬರದಿದ್ದರೆ ಅಡ್ಡಿ ಇಲ್ಲ. ಕರ್ತವ್ಯದಲ್ಲಿ ಜಾಗರೂಕತೆಯನ್ನಿಟ್ಟು ಸತ್ಯವನ್ನು ಬಿಡದೆ ನಡೆಯಬೇಕು. ಸತ್ಯದಿಂದ ಜಯವು ದೊರಕುವದು. ಜಯವು ದೊರಕಿದರೆ ಸೊಕ್ಕು ಮಾಡಬಾರದು. ಸೊಕ್ಕಿನವರೂ ಸಿಟ್ಟಿನವರೂ ಕೇಡು ಹೊಂದುವರು. ಉದ್ಯೋಗ ಮಾಡುವವರು ಅವಸರ ಮಾಡಬಾರದು. ತಾಳ್ಮೆಯುಳ್ಳವರು ಉದ್ಯೋಗ ಮಾಡದೆ ಕುಳಿತ ಕೊಳ್ಳಬಾರದು. ಅಧಿಕಾರವುಳ್ಳವರು ನ್ಯಾಯದಿಂದಲೂ, ಸಭ್ಯತನದಿಂದಲೂ ನಡೆಯತಕ್ಕದ್ದು. ಒಂದೇ ಕಾಲಕ್ಕೆ ಅನೇಕ ಕೆಲಸಗಳನ್ನು ಮಾಡುವ ಪ್ರಸಂಗ ಬಂದಲ್ಲಿ ತಮಗೆ ವಿಶೇಷ ಹತ್ತಿ ಹೊಂದಿದ ಕೆಲಸಗಳನ್ನು ಮುಂಚೆ ಮಾಡಿ ಮುಗಿಸಬೇಕ ಕುಟುಂಬದವರು, ನೆರೆ ಹೊರೆಯವರು, ಮಿತ್ರರು, ದೇಶ ಬಾಂಧವರು, ಇವರಲ್ಲರ ಮೇಲೆ ಉಪಕಾರವನ್ನು ಮಾಡುವವಲ್ಲದೆ ಮಿಕ್ಕವರ ಮೇಲೆ ಸಹ ಮಾಡಬೇಕು ನನ್ನವರಿಗೆ ಹಿತವಾ ಬೇಕೆಂದು ಅನ್ಯರಿಗೆ ಅನ್ಯಾಯ ಮಾಡಬಾರದು.

ಜಗತ್ತಿನೊಳಗೆ ನೀತಿ ಧರ್ಮಗಳಿಗಿಂತ ಉನ್ನತ ವಸ್ತುಗಳು ಇನ್ನಾವವೂ ಇಲ್ಲ ಅವುಗಳಿಂದಲೇ ಸೌಖ್ಯ ಸಿರಿಗಳು ಬರುವವು ಅವುಗಳನ್ನು ಬಿಟ್ಟು ನಡೆಯುವವರಿಗೆ ದುಃಖದಾರಿದ್ರ್ಯಗಳು ತಟ್ಟುವವು. ಕಾರ್ಯಕ್ಕೆ ತಕ್ಕ ಫಲಗಳು ದೊರೆಯಬೇಕೆಂದು ಪರಮಾತ್ಮನ ಸೃಷಿಯಲ್ಲಿ ವಿಧಿಸಲ್ಪಟ್ಟಿದೆ. ಒಳ್ಳೇತನಕ್ಕೆ ಸೌಖ್ಯವೂ, ಕೆಟ್ಟತನಕ್ಕೆ ದುಃಖವೂ ಪರಿಣಮಿಸುವವು ದುಷ್ಟರಿಗೆ ಸಿರಿಯುಬಂದು ಶಿಷ್ಟರಿಗೆ ದರಿದ್ರತನವುಂಟಾದರೆ ಇದಕ್ಕಿಂತ ಹೆಚ್ಚಿನ ದುರದೃಷ್ಟವು ಇನ್ನಾವದು ?

ನಮ್ಮ ಜನ್ಮದ ಸದ್ಗತಿಯು ನಮ್ಮ ನಡತೆಗಳ ಮೇಲೆಯೇ ಅವಲಂಬಿಸಿರುವದು. ಸ್ವರ್ಗ ನರಕಗಳು ನಮ್ಮ ಶುದ್ಧಾಶುದ್ಧ ನಡಾವಳಿಗಳ ಮೇಲಿಂದಲೇ ದೊರಕುವವು. ನಾವು ದಿನಾಲು

ಸ್ವರ್ಗ ನರಕಗಳನ್ನು ನೆನಪು ಮಾಡಿಕೊಂಡು. ನಾವು ಮಾಡಿದ ಪಾಪ ಪುಣ್ಯಗಳನ್ನು ಆಗಾಗ್ಗೆ ವಿಚಾರ ಮಾಡುತ್ತ ದೇವರನ್ನು ನಂಬಿ ನಡೆದರೆ ನಮ್ಮಿಂದ ಕಡಿಮೆ ಪಾಪಗಳು ಘಟಿಸುವವು. ಸತ್ಕೃತ್ಯವೆಂಬ ಬೀಜವನ್ನು ಬಿತ್ತಿದರೆ ಸದಾಚರಣವೆಂಬ ಗಿಡವು ಹುಟ್ಟಿ ಅದರಿಂದ ಸದ್ಗತಿಯೆಂಬ ಫಲವು ದೊರಕುವದು.

ಮನುಷ್ಯರೊಳಗೆ ಅಪಕಾರಿಗಳೂ ಉಪಕಾರಿಗಳೂ ಎಂಬ ಎರಡು ವರ್ಗಗಳುಂಟು. ಅಪಕಾರಿಗಳಿಗೆ ಗೆಳೆಯರು ಹಗೆಗಳಾಗಿ, ನೆನವು ಅಳಲಾಗಿ, ಜನ್ಮವು ದುಃಖಮಯವಾಗಿ ಜಗತ್ತು ಸೆರೆ ಮನೆಯಾಗಿ, ಮರಣವು ಭಯಪ್ರದವಾಗುವದು. ಉಪಕಾರಿಗಳಿಗೆ ಎಲ್ಲರೂ ಪ್ರೀತಿಸಿ ಮಾನಕೊಡುವರು. ಅವರು ಮರಣಪಟ್ಟರೆ "ಹೆತ್ತವ್ವ ಮಗನಾ ಕರೆದಂತೆ ಕೈಲಾಸಕೆತ್ತಿಕೊಂಬುವರು" ಎಂಬ ಸರ್ವಜ್ಞ ಕವಿಯ ನುಡಿಯಂತೆ ಅವರಿಗೆ ಸೌಖ್ಯವಾಗುವದು ಒಳ್ಳೇ ಜನರಿಗೆ ಮರಣದ ಹೆದರಿಕೆಯೇ ಇಲ್ಲ

ನಾವು ನಮ್ಮ ಶುದ್ಧಾತ್ಮವನ್ನು ವಿಚಾರಿಸಿಕೊಂಡು ನಡೆದರೆ ನಮ್ಮಿಂದ ಅನುಚಿತ ಕೆಲಸಗಳು ಎಂದೂ ಆಗಲಿಕ್ಕಿಲ್ಲ. ಸಭ್ಯರೂ ಸುಶೀಲರೂ ಆಗಿ ಜ್ಞಾನಿಗಳಿಂದ ಕೊಂಡಾಡಿಸಿಕೊಳ್ಳುವಂತೆ ನಡೆಯುವದೇ ಸದ್ಗತಿಯ ಕುರುಹು. ನಾವು ನಮ್ಮ ಕೃತಿಗಳಲ್ಲಿ ಶುದ್ಧರಿರುವದಲ್ಲದೆ ನಮ್ಮ ವಿಚಾರಗಳಿಂದಲೂ ಶುದ್ಧರಿರಬೇಕು. ನಮ್ಮ ಕೈ, ಬಾಯಿ, ಕಣ್ಣು, ಮನಸ್ಸುಗಳು ಸಹ ಶುದ್ಧವಿರಬೇಕು ಹೊರಗೆ ಮಾತ್ರ ವೇದಾಂತಿಯ ವೇಷವನ್ನು ಹಾಕಿಕೊಂಡು ಮನಸ್ಸಿನೊಳಗೆ ದುರಾಲೋಚನೆಯನ್ನು ಮಾಡುತ್ತ ಕುಳಿತು ಕೊಳ್ಳುವವನು ಗೋಮುಖ ವ್ಯಾಘ್ರನು ಜನರು ನೋಡದಿದ್ದರೂ ಪರಮೇಶ್ವರನು ನಮ್ಮನ್ನು ಒಳಗೂ ಹೊರಗೂ ಕೂಡಾ ಪರೀಕ್ಷಿಸುತ್ತಾನೆ. ಆತನು ನೀತಿವಂತರಿಗೂ ಧರ್ಮವಂತರಿಗೂ ಮಾತ್ರ ಇಹಪರಗಳಲ್ಲಿ ಸೌಖ್ಯವನ್ನೂ ಸದ್ಗತಿಯನ್ನೂ ಕೊಡುವನು

— ಗ. ಹು. ಹೊನ್ನಾಪುರಮಠ

## ಪರಿಚಯು

ಶ್ರೀ. ವಾ. ಗ ಹು. ಹೊನ್ನಾಪುರಮಠ ಇವರು ಹೊಸ ಗನ್ನಡ ಗದ್ಯ ಸಾಹಿತ್ಯದ ನಿರ್ಮಾಪಕರಲ್ಲೊಬ್ಬರಾಗಿ, ೨೦ ನೇ ಶತಮಾನದ ಪ್ರಾರಂಭದಲ್ಲಿ ಅದೇ ಎಚ್ಚತ್ತ ಕರ್ನಾಟಕಕ್ಕೆ ಅನೇಕ ಸಾಹಿತ್ಯ ಕೃತಿಗಳನ್ನು ಒದಗಿಸಿ ಕೊಟ್ಟಿದ್ದಾರೆ. ಇವರು ಧಾರವಾಡ ದಲ್ಲಿ ಒಳ್ಳೇ ವಕೀಲರಾಗಿದ್ದರು. ಕರ್ನಾಟಕದಲ್ಲಿಯು ಸ್ತ್ರೀ-ಪುರುಷರ ಮನೋವಿಕಾಸಕ್ಕೆ ಸಹಾಯವಾಗುವ ಸಾಹಿತ್ಯದ ಕೊರತೆಯನ್ನು ನೋಡಿ, ಉಚ್ಚ ಆಂಗ್ಲ ಸಾಹಿತಿಗಳ ಕೃತಿಗಳಿಂದ ಪ್ರೇರಿತರಾಗಿ ಬಹುಮುಖವಾದ ಸಾಹಿತ್ಯಸೇವೆಯನ್ನು ಸಲ್ಲಿಸಿದರು. ಇವರು ಮುಟ್ಟಲಾರದ ಯಾವ ಗದ್ಯಸಾಹಿತ್ಯದ ಪ್ರಕಾರವೂ ಇಲ್ಲ. ಇವರು ಸರಸವಾದ ಕಾದಂಬರಿಗಳನ್ನೂ, ನಾಟಕಗಳನ್ನೂ, ಕತೆಗಳನ್ನೂ, ಚರಿತ್ರೆಗಳನ್ನೂ ನಿಬಂಧಗಳನ್ನೂ ಸುಲಭವಾದ ಸ್ಫೂರ್ತಿಪ್ರದವಾದ ಶೈಲಿಯಲ್ಲಿ ಬರೆದು, ಕನ್ನಡಸಾಹಿತ್ಯಕ್ಕೆ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಎಲ್ಲ ಗ್ರಂಥಗಳೂ ಓದತಕ್ಕಂತಹವಾಗಿವೆ. ಈ ನಿಬಂಧವನ್ನು ಅವರ 'ನೀತಿಮಂಜರಿ' ಎಂಬ ನಿಬಂಧ ಸಂಗ್ರಹದಿಂದ ಆಯ್ದುಕೊಂಡದ್ದಾಗಿದೆ.

**ಅಭ್ಯಾಸಃ —**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

(೧) ಒಳ್ಳೆ ನಡತೆಯು ಎಲ್ಲಕ್ಕಿಂತ ಹೆಚ್ಚಾದ ಆಸ್ತಿಯೆಂಬುದನ್ನು ಸ್ಪಷ್ಟವಾಗಿ ವಿವರಿಸಿರಿ.

(೨) ಜಗತ್ತಿನಲ್ಲಿ ಎಲ್ಲರಿಗೂ ದೊರಕಿಸಲು ಕಠಿಣವಾದ ಮತ್ತು ಸುಲಭವಾದ ಗುಣಗಳು ಯಾವವು ?

(೩) ಸುಲಭವಾದ ಗುಣಗಳನ್ನು ಗಳಿಸಲು ಯಾವ ಯಾವ ಮಾತುಗಳು ಅಡ್ಡಿಯಾಗುತ್ತವೆ ?

(೪) ಜಗತ್ತಿನಲ್ಲಿ ಎಲ್ಲರಿಂದಲೂ 'ಸೈ' ಅನ್ನಿಸಿಕೊಳ್ಳುವಂತೆ ನಾವು ಯಾವ ಕೃತಿಗಳನ್ನು ಮಾಡತಕ್ಕದ್ದು ?

(೫) ನಮ್ಮ ನಡತೆಯಲ್ಲಿ ನೀತಿ ಧರ್ಮಗಳಿಗೆ ಯಾವ ಸ್ಥಾನವಿದೆ?
(೬) 'ಪರೋಪಕಾರ' ಇಲ್ಲವೆ 'ವಿದ್ಯಾರ್ಜನೆ' ಇದರ ಮೇಲೆ ೩೦ ಸಾಲುಗಳಷ್ಟು ನಿಬಂಧವೊಂದನ್ನು ಬರೆಯಿರಿ.

## ಸ್ಪಷ್ಟೀಕರಿಸಿರಿ:—

'ನಾವು ಶುದ್ಧಾತ್ಮನನ್ನು ವಿಚಾರಿಸಿಕೊಂಡೇ ನಡೆದರೆ ನಮ್ಮಿಂದ ಅನುಚಿತ ಕೆಲಸಗಳು ಎಂದೂ ಆಗಲಿಕ್ಕಿಲ್ಲ.'

## ವ್ಯಾಕರಣ:—

(ಅ) ಕೆಳಗಿನ ಸಾಮಾನ್ಯ ವಾಕ್ಯಗಳನ್ನು ಸಂಮಿಶ್ರವಾಕ್ಯಗಳನ್ನಾಗಿ ಮಾಡಿರಿ.

(೧) ಉದ್ಯೋಗ ಮಾಡುವಾಗ ಯಾರೂ ದುರಾಶೆಯಿಂದ ಕುದಿಯಬಾರದು.

(೨) ಸದ್ವರ್ತನೆಯನ್ನು ಗಳಿಸುವ ರೀತಿಯನ್ನು ತಿಳಿಸು.

(೩) ಸಾರ್ವಜನಿಕ ಕೆಲಸಮಾಡುವವನು ಕೀರ್ತಿಯನ್ನು ಬಯಸಬಾರದು.

(೪) ಗೆಲುವಿನ ಸಂಗತಿಯನ್ನು ಕೇಳಿದ ಕೂಡಲೇ ಅವನಿಗೆ ತುಂಬಾ ಸಂತೋಷವಾಯಿತು.

(೫) ಬೆಳದಿಂಗಳ ಇರುಳಿನ ಶೋಭೆಯನ್ನು ಬಣ್ಣಿಸಬಹುದೆ?

(ಬ) **ಹುರಿ-ಮೋಸ** ಇದ್ದಂತೆ ಸರಿಯಾದ ಶಬ್ದ ಹಾಕಿ ಜೋಡು-ನುಡಿ ಮಾಡಿ, ಅವುಗಳನ್ನು ವಾಕ್ಯದಲ್ಲಿ ಉಪಯೋಗಿಸಿರಿ.
ನಯ—; ಎಣ್ಣೆ—; ಕಾಳು—; ಗುಡಿ—; ಉಪ್ಪು—;
ಹಾಸು—; ಬೇವು—; ಕನಸು—; ಕೊನರು—; ಬೆಳಗು—;

(ಕ) ಕೆಳಗಿನವುಗಳ ತತ್ಸಮ ತದ್ಭವ ಕೊಡಿರಿ:—
ಉದ್ಯೋಗ, ವಿದ್ಯೆ, ಸಿರಿ, ತ್ಯಾಗ, ಸುಖ, ಕಾರ್ಯ.

# ೮. ಕುಮಾರ ರಾಮ

ಅರಸುಗುವರ ಚನ್ನಿಗರಾಮನು ತನ್ನ ಆಯುಧಗಳನ್ನು ಒಡವೆಗಳನ್ನು ತರಿಸಿ ಕಾಲುಗಗ್ಗರ, ಕೊರಳಲ್ಲಿ ಗೆಜ್ಜೆ, ಹೊಳೆಯುವ ಮಾಣಿಕ್ಯದ ಹಲ್ಲಣ, ತಳಪುರನ್ನದ ಪಟಿ, ಮುತ್ತಿನ ಬಾಸಿಂಗಗಳನ್ನು ಧರಿಸಿದನು ಭಲ್ಲೆಯನ್ನು ಹಿಡಿದು ಲಕ್ಷ ಕುದುರೆಗಳನ್ನು ಹೊಕ್ಕಲಿಕ್ಕುವೆನೆಂದು ಹೇಳುತ್ತ ಬೊಲ್ಲನನ್ನು ಕರೆಸಿ, ಗಂಧಾಕ್ಷತೆಯನ್ನು ಇರಿಸಿ, ವಂದಿಸಿ, ಕುದುರೆಯನ್ನೇರಿದನು. ಆರು ತಿಂಗಳಿಂದಲೂ ಮೇವು ನೀರನ್ನು ತೊರೆದಿದ್ದ ಬೊಲ್ಲನು, ತನ್ನೊಡೆಯ ಚನ್ನಿಗರಾಮನು ಬಂದುದನ್ನು ಕಂಡು ಹರ್ಷಿಸಿ ಪಕ್ಷಿಯಂತೆ ಹಾರಿತು. ರಾಮನಿಗೆ ಬೈಚಪ್ಪನು ಜೋಡು ವಜ್ರಾಂಗಿಯ ತಲೆಯ ತಾಳಿ ಮೊದಲಾದವುಗಳನ್ನು ಕೂಡಿಸಿದನು. ಮಾಯಾಕಾರನಾದ ಬೈಚಪ್ಪನು ರಾಯರಾವುತನೆಂಬ ಬಿರುದನ್ನು ಕೊಟ್ಟು, ರಾಮನಿಗೆ ಯುದ್ಧಕ್ಕೆ ಅನುವಾಗಿ ನಿಲ್ಲಿಸಲು, ಈ ರಾಯರಾವುತನು ಎಲ್ಲಿಂದ ಬಂದನೆಂದು ಎಲ್ಲರೂ ಕೇಳುವವರಾದರು. ಕಲ್ಯಾಣ ನಗರಿಯಿಂದ ರಾವುತನು ಬಂದಿರುವನೆಂದು ಕೇಳಿ, ಹೊಸ ರಾಹುತನಿಗೆ ಹೆಸರಾದ ಕುದುರೆಯುವರನ್ನು ಫೌಜನ್ನಾಗಿ ಮಾಡಿಕೊಟ್ಟು ಶೃಂಗಾರ ತೋಟಕ್ಕೆ ಕರೆತಂದನು. ಸುಲ್ತಾನನ ಮಂತ್ರಿ ನೇಮಿಯ ದಂಡಿಗೆ ಎದುರು ಫೌಜನ್ನು ಏರ್ಪಡಿಸಿದನು. ದೇವಿಶೆಟ್ಟಿಯಲಿಂಗ, ಬೇವಿನ ಶಿಂಗಯ್ಯ, ಭಾವಸಂಗಮ, ಹಾರೇಲಿಂಗ, ಬೆಟ್ಟದ ಸಿಂಗ, ಮರುಳುಪಾಪ, ತೋಟಗಾರ ದ್ಯಾವ, ವಿರೂಪ, ಹಾವಳಿಕಾರ ಹೆಂಪಯ್ಯ, ಮಾದಿಗರ

ಹಂಪ, ಸಾದನೆ ಬಸವ, ರಾಜಯ್ಯ, ಎನಾಮಲ ಚಿತ್ತ, ಯಾರ ಪೋತು ಗಂಗು, ಉರಿವರೊಳ್ಳಿಯ ನಾಗಣ್ಣ, ಬೂಟಕ ಬೊಮ್ಮ, ಮದಿಗೊಂಡ್ಲ ಓಬ ಮುಂತಾದವರು ರಾಮನ ಸಹಾಯಕ್ಕಾಗಿ ಸಿದ್ಧರಾದರು. ಎದುರು ಭಟರುಗಳನ್ನು ಮೂದಲಿಸುತ್ತ ಭೇದ ವಿಲ್ಲದೆ ಬಾಮೂರಖಾನನು ರಾಮನನ್ನು ಸೋಲಿಸಲು ಬಂದನು. ಇವರನ್ನೆಲ್ಲ ಯುದ್ಧಕ್ಕೆ ಸನ್ನದ್ಧರನ್ನಾಗಿ ಮಾಡಿ ಶೃಂಗಾರ ತೋಟ ದಲ್ಲಿರಿಸಿ, ಬೈಚಪ್ಪನು ಬೇಗದಿಂದ ಕಂಪಿಲರಾಯನ ಬಳಿಗೆ ಬಂದು ತನ್ನ ಮಾತಿನ ಮೇಲೆ ಪೊಸ ರಾಹುತನು ಬಂದು ಯುದ್ಧಕ್ಕೆ ಸಿದ್ಧನಾಗಿರುವುದನ್ನು ತೋರಿಸಿದನು. ರಾಮಪ್ಪನನ್ನು ಹೋಲುವ ಪ್ರತಿವೀರನನ್ನು ಕಾಣೆನು. ಅವನು ಶತ್ರುದಳವನ್ನು ಕಂಡಿದ್ದರೆ, ಅವರ ಮೇಲೆ ತಾಮಸ ಮಾಡುತ್ತಿದ್ದನೆ? ಅಂಥ ರಾಮನು ಪುನಃ ಹುಟ್ಟುವನೇ ಎಂದು ಕೇಳುತ್ತಿರಲು ಕಾಳಗಕ್ಕೆ ಹೊರಡಲು ಸಿದ್ಧ ರಾಗಿದ್ದ ಯಕ್ಕಟ್ಟಿಗರು ನೇಮಿಯ ಬಲವನ್ನು ಮುರಿದು ಶತ್ರು ಗಳನ್ನು ಸೆರೆತರುವೆವೆಂದು ಹೇಳುತ್ತ ಪ್ರಯಾಣ ಬೆಳಸಿದರು. ಅರಿರಾಯಮರ್ದನ ಹೊರಟನೆಂದು ರಣಭೇರಿಗಳು ಮೊಳಗಿದವು.

ಕೋಟೆಯಿಂದ ಹೊರಹೊರಟು ತುರುಕರ ಮೇಲೇರಿ ನಡೆ ದರು. ಹೊಸ ರಾವುತನ ಮೂಗುಸನ್ನೆಯಿಂದ ರಾವುತರು ಸಾಗರದಂತೆ ಮುಂದೆ ನಡೆದರು. ಬಾದೂರಖಾನನು ಶತ್ರುಗಳ ದಂಡಿನ ಮೇಲೆ ಬಿದ್ದು ಅವನನ್ನು ಮೂದ ಲಿಸಿದನು. 'ಓಡದಿರಿ ಹೇಡಿಗಳಿರಾ' ಎಂದು ಬಾದೂರಖಾನನು ತುರುಕರ ಆನೆಯ ಹಿಂಡಿನ ಮೇಲೆ ಎರಗಿದನು. ಭಾಪು ! ಭಾಪುರೇ ! ಮಜರೇ ! ಧೀರ ಬಾದೂರಖಾನ ! ಎಂದು ಹೊಗಳಿ ದರು. ನೇಮಿಯು ಖಾನರ ಮೇಲೆ ಬೀಳುತ್ತಿರುವ ಶತ್ರುಗಳ ತಂಡವನ್ನು ನೋಡಿ ರಾಮನು ಸತ್ತ ಸಂಗತಿಯು ಸಟೆ ಎಂದು ಹೇಳುತ್ತ ತಾನೆ ಯುದ್ಧಕ್ಕೆ ಸಿದ್ಧನಾಗಿ ಎದುರಿಗೆ ಬಂದನು.

ಕಂಪಿಲರಾಯನ ವೀರ ಮನ್ನೆಯರು ನಾಲ್ಕು ಭಾಗವಾಗಿ ವಿಂಗಡಿಸಿಕೊಂಡು ತಮ್ಮ ಸಾಹಸಗಳನ್ನು ತೋರುತ್ತ ವೈರಿ ಶಿರಗಳನ್ನು ತೂರುತ್ತ ಒಂದು ದಿಕ್ಕಿನಲ್ಲಿ ಮುಂದುವರಿದರು. ಇನ್ನೊಂದು ದಿಕ್ಕಿನಲ್ಲಿ ಹೊಸ ರಾಜ.ತನ ಪರಿವಾರವು ಶತ್ರುಗಳ ಅಲೆಗಳನ್ನೆಲ್ಲ ಸವರುತ್ತ ನಡೆಯಿತು. ರಾಮನು ಬೊಲ್ಲನನ್ನು ಏರಿ ಮಲ್ಲಾತರನ್ನೂ, ಖಾನರನ್ನೂ ಕೊಲ್ಲುತ್ತ ಸಾಗಿರಲು ಉಭಯ ರ ಕಡೆಯವರು ತಲೆಗಳನ್ನು ಕತ್ತರಿಸುತ್ತ ಕೈಕಾಲುಗಳನ್ನು ಮುರಿಯುತ್ತ ಹೋರಾಡಿದರು. ನೇಮಿಯ ದಂಡು ಸಂಹಾರ ಮಾಡುತ್ತ ಮುಂದೆ ನಡೆದಿರಲು, ಕಾಲ ಭೈರವನಂತೆ ಶತ್ರುಗಳ ತಲೆಯನ್ನು ಚಂಡಾಡುತ್ತ ನಿಂತಿರುವ ಏಕೈಕ ವೀರನನ್ನು ನೋಡಿ ನೇಮಿ ಖಾನನು ಸ್ತಂಭಿತನಾದನು. ಇವನಾರಿರಬಹುದು? ಎಂದು ದೃಷ್ಟಿಸಿ ನೋಡಿ ಕೆಲವರು ರಾಮನಹುದೆಂದು, ಮತ್ತೆ ಕೆಲವರು ಅಲ್ಲವೆಂದು ವಾದಿಸಿ ಕೊನೆಗೆ ರಾಮನಾಥನೇ ಅಹುದೆಂದು ನಿರ್ಧರಿಸಿ, ಕಂಗೆಟ್ಟಿರುವ ಕಳ್ಳರು ಕನ್ನವನ್ನಿಕ್ಕಿ ಮನೆಯನ್ನು ಹೊಕ್ಕು ಕೆಮ್ಮಿದಂತಾಯಿತು ನಮ್ಮ ಪಾಡು. ಇನ್ನೇನು, ಓಡಿಹೋಗೋಣವೆಂದರೆ ರಾಮನು ಬಿಡುವನೇ ? ಎನ್ನುತ್ತ ತಮ್ಮ ತಮ್ಮೊಳಗೆ ಮಾತಾಡುತ್ತಿದ್ದರು. ನೇಮಿಯ ಎಡಬಲದಲ್ಲಿದ್ದ ಕಡುಗಲಿ ವೀರ ರಾಹುತರು, ಸಾವಕಾಶ ಮಾಡದೆ ರಾಮನನ್ನು ಕಡಿದು ಯಮಪುರಿಗೆ ಕಳುಹಿಸಿ, ಬಾದೂರಖಾನನನ್ನು ಎಡಗೈ ಕಟ್ಟಿ ತರುವೆವು ಅಪ್ಪಣೆಯನ್ನು ದಯಪಾಲಿಸೆಂದು ನೇಮಿಯ ಸುತ್ತಲು ಕಾಮುರ್ಗಿಲಿನಂತೆ ಖಾನರು ಸೇರಿ ಪ್ರಾರ್ಥಿಸುತ್ತಿದ್ದರು. ಇದನ್ನು ರಾಮನು ಕಂಡು ತನ್ನ ಕುದುರೆಯನ್ನೇರಿ ತನ್ನವರನ್ನೆಲ್ಲ ಒಟ್ಟಿಗೆ ಸೇರಿಸಿಕೊಂಡು, ಸುಲ್ತಾನನ ಮಂತ್ರಿ ನೇಮಿಯೊಡನೆ ಯುದ್ಧ ಮಾಡಲು ಓಡಿಬಂದು ಮುತ್ತಿದನು. ಕುದುರೆ, ಕಾಲಾಳು ಮತ್ತು ಆನೆಗಳು ಎದುರಾದವು. ರಾಮನು ವೈರಿಗಳನ್ನು ಸದೆಬಡೆಯುತ್ತಿರುವಾಗ ತುಂಬುರಖಾನನು ತನ್ನ ಚತುರಂಗ ಬಲದಿಂದ ಕೂಡಿ

ರಾಮುನನ್ನು ಮೂದಲಿಸುತ್ತ, ಖಡ್ಗವನ್ನು ಝಳಪಿಸುತ್ತ ರಾಮು ನಿಗೆ ಎದುರಾದನು. ರಾಮುನು ನಿಲ್ಲು ಎಂದು ಹೇಳುತ್ತ ತುಂಬುರ ಖಾನನ ಮೇಲೆ ಬೀಳಲು ಉಭಯ ದಳಗಳಿಗೆ ರಣರಂಗವಾ ಯಿತು ರಾಮುನ ಖಡ್ಗದೇಟಿಗೆ ಅವನ ನಡುಬೆನ್ನು ತೊಡೆಗಳು ಮುರಿದವು; ನೆತ್ತಿಯು ಚಿಪ್ಪುಹಾರಿ, ಗೋಣುಮುರಿದು ತುಂಬು ರಖಾನನು ನೆಲಕ್ಕುರುಳಿ ಸತ್ತು ಹೋದನು. ತುಂಬುರಖಾನನು ಮಡಿದುದನ್ನು ಕಂಡು ಅವನ ಪರಿವಾರವು ಹುಯ್ಯಲು ಹಾಕುತ್ತ ರಾಮುನು ಸಿಕ್ಕಿದನೆಂದು ಅವನನ್ನು ಮುತ್ತಿದರು. ರಾಮುನ ಕಡೆ ಯುವರು ರಾಮುನ ಸಹಾಯಕ್ಕೆ ಬಂದರು. ರಾಮುನೂ ಅವನ ಕಡೆಯುವರೂ ಅಬ್ಬರಿಸಿ ಹೊಡೆಯಲು ಮೆದುಳು ಚಿಪ್ಪೊಡೆದು ಕರುಳು ಹರಿದು ಅರಿಬಲವು ಸಾಯುತ್ತಿರಲು ಭೂತ ಪ್ರೇತ ಗಳಿಗೆ ಹಬ್ಬವಾಯಿತು ರಾಮುನು ಸತ್ತ ಸುದ್ದಿಯನ್ನು ಕೇಳಿಬಂ ದೆವು. ಆದರೆ ರಾಮುನು ಎದುರಿಗೆ ಇರುವನು. ಅವನು ಸತ್ತಿರುವುದು ಸಟೆಯಾಯಿತು. ಭೂಮಿಯನ್ನು ಹೊಕ್ಕರೂ ಅವನು ನಮ್ಮನ್ನು ಬಿಡುವದಿಲ್ಲ ಎಂದು ನೇಮಿಯ ಕಡೆಯುವರು ಹೇಳುತ್ತ, ಹುಲ್ಲನ್ನು ಕಚ್ಚಿ, ಹುತ್ತವನ್ನೇರಿ ನಿಂತಲ್ಲಿ ನಿಲ್ಲದೆ ಓಡಿಹೋದರು ರಾಮುನು ಬಿಡದೆ ವೈರಿಗಳನ್ನು ಬೆನ್ನಟ್ಟಲು, ಬೆಟ್ಟ, ಗವಿ, ಗವ್ಹರಗಳಲ್ಲಿ ಬಿದ್ದು, ದಾರಿಕಾಣದೆ ಓಡಿಹೋದರು ಬಾದೂರಖಾನನು ಅವರನ್ನು ಹೆದ್ದೊರೆತನಕ ಅಟ್ಟಿ, ತೋರೆಗಲ್ಲು ಬಾದಾಮಿಯ ಮುಂದೆ ಕುದುರೆಯನ್ನಿಳಿದನು. ರಾಮುನು ಐದಾರು ಗಾವುದ ಶತ್ರುಗಳನ್ನಟ್ಟಿ ಕುಮ್ಮಟದುರ್ಗಕ್ಕೆ ಹಿಂದಿರುಗಿದನು.

— ಹುಲ್ಲೂರ ಶ್ರೀನಿವಾಸ ಜೋಯಿಸ.



# ಪರಿಚಯ

ಶ್ರೀಮಾನ್ ಹುಲ್ಲೂರ ಶ್ರೀನಿವಾಸ ಜೋಯಿಸರು ಮೈಸೂರ ಚಿತ್ರದುರ್ಗದ ನಿವಾಸಿಗಳು. ಪದವೀಧರರು ಒಳ್ಳೆಯ ವಕೀಲರು. ಸುಪ್ರಸಿದ್ಧ ಇತಿಹಾಸ ಸಂಶೋಧಕರು. ನುರಿತ ಲೇಖಕರು. ಚಿತ್ರದುರ್ಗದ ಬಳಿಯ ಅನೇಕ ಐತಿಹಾಸಿಕ ಸ್ಥಳಗಳನ್ನು ಪರಿಶೀಲಿಸಿ ಅಭ್ಯಸಿಸಿ ಅವುಗಳ ಬಗೆಗೆ ಆಗಾಗ ಪತ್ರಿಕೆಗಳಲ್ಲಿ ಮಹತ್ಪೂರ್ಣವಾದ ಸಂಶೋಧನಾತ್ಮಕ ಲೇಖಗಳನ್ನು ಬರೆಯುತ್ತಿರುತ್ತಾರೆ. ಕನ್ನಡ ನಾಡಿನ ರಾಜಕುಲಗಳೂ, ವೀರ ಮನೆತನಗಳೂ ಅನೇಕ ಸ್ಥಲಗಳಲ್ಲಿ ತಮ್ಮ ಮಹತ್ವದ ಲೀಲೆಗಳನ್ನು ತೋರಿ ಮೆರೆದದ್ದು ಸುಪ್ರಸಿದ್ಧವಿದೆ. ಆ ಮನೆತನಗಳ, ರಾಜಕುಲಗಳ, ಐತಿಹಾಸಿಕ ಕ್ಷೇತ್ರಗಳ ಸಹಜ ಸುಂದರವಾದ ಇತಿಹಾಸವು ನಮಗಿಂದು ಅತ್ಯಂತ ಆವಶ್ಯಕವಾಗಿದೆ.

ಶ್ರೀಯುತರ ಲೇಖನ ಶೈಲಿಯಲ್ಲಿ ಸೊಬಗಿದೆ; ಸರಲತೆಯಿದೆ; ಸ್ಪಷ್ಟವಾದ ಉಜ್ವಲತೆಯಿದೆ; ಐತಿಹಾಸಿಕ ರಸವನ್ನೂ ತುಂಬುವ ವೀರಶೈಲಿಯ ವೈಶಿಷ್ಟ್ಯವು ಇವರಿಗೆ ಸಾಧಿಸಿದೆ

ಕನ್ನಡನಾಡಿನ ಕೀರ್ತಿವೈಭವಕ್ಕೆ ಕಲಶಪ್ರಾಯವಾದ ವಿಜಯನಗರ ಮಹಾಸಾಮ್ರಾಜ್ಯಕ್ಕೇ ಪೂರ್ವ ಪೀಠಿಕೆಯನ್ನು ಹಾಕಿದ ಅದ್ಭುತ ಪರಾಕ್ರಮಿಯೂ ಲೋಕವಿಖ್ಯಾತ ಸುಂದರನೂ ಆದ ಕುಮ್ಮಟದುರ್ಗದ 'ಕುಮಾರ ರಾಮ'ನ ಚರಿತ್ರೆಯ ವಿಷಯವಾಗಿ ಶ್ರೀಮಾನ್ ಶ್ರೀನಿವಾಸ ಜೋಯಿಸರು ತುಂಬಾ ಪ್ರಯತ್ನಪಟ್ಟು, ಕುಮಾರ ರಾಮನ ಚರಿತ್ರೆಯನ್ನು ಬರೆದಿದ್ದಾರೆ. ಕುಮಾರ ರಾಮನ ಸಾಂಗತ್ಯಗಳ ವಿಷಯಕ್ಕೇ ಇವರು ತಮ್ಮ ಸಂಶೋಧನ ಸಾಧನೆಯನ್ನು ಮೀಸಲಿಟ್ಟಂತಿದೆ. ಇತ್ತೀಚೆ ಇವರು 'ಕುಮಾರ ಸಾಂಗತ್ಯ' ವೊಂದನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಈಗ ಆಯ್ದ ಅವತರಣಿಕೆಯನ್ನು ಶ್ರೀನಾಗಸಂಗಯ್ಯ ಕವಿ ವಿರಚಿತ

ವಾದ ಕುಮಾರ ರಾಮನ ಸಾಂಗತ್ಯವನ್ನು ಸೊಗಸಾದ ಗದ್ಯ ದಲ್ಲಿ ನಿರೂಪಿಸಿದ ಶ್ರೀಮಾನ್ ಜೋಯಿಸರ 'ಗಂಡುಗಲಿ ಕುಮಾರ ರಾಮು' ಎಂಬ ಗ್ರಂಥದಿಂದ ತೆಗೆದುಕೊಂಡಿದೆ.

ಕಥಾಸಂದರ್ಭ:--

ಕನ್ನಡ ದೊರೆಯಾದ ಕಂಪಿಲರಾಯನಿಗೆ ಹಿರಿಯ ರಾಣಿಯಾದ ಹರಿಯಾಲದೇವಿಗೆ 'ಕುಮಾರ ರಾಮ' ನೆಂಬ ಮನ್ಮಥ ರೂಪಿಯಾದ ಮಗನು ಹುಟ್ಟಿದನು. ಕಂಪಿಲರಾಯನು ಮುಪ್ಪಿನ ಕಾಲದಲ್ಲಿ ಬಡಗು ಗಾತಿಯಾದ ರತ್ನಾಂಬೆಯೆಂಬವಳನ್ನು ಮದುವೆಯಾಗಿ ಅವಳೊಡನೆ ಪ್ರೀತಿ ಯಿಂದಿದ್ದ. ಈ ಹೊತ್ತಿಗೆ ಕುಮಾರ ರಾಮನಿಗೆ ತಾರುಣ್ಯವು ಪ್ರಾಪ್ತ ವಾಗಿತ್ತು. ಇವನ ರೂಪಕ್ಕೆ ದಿಲ್ಲಿಯ ಸುಲ್ತಾನನ ಮಗಳೂ ಮೋಹಿಸಿ ದ್ದಳು ಸುಲ್ತಾನರು ಎಷ್ಟು ಪ್ರಯತ್ನಿಸಿದರೂ ರಾಮನು ಸೋಲಲಿಲ್ಲ. ವಸಂತಕಾಲ ಪ್ರಾಪ್ತವಾಯಿತು. ರಾಮನು ತನ್ನ ಗೆಳೆಯರೊಂದಿಗೆ ಚೆಂಡಾಟ ವಾಡುತ್ತಿದ್ದನು. ಚಿಕ್ಕರಾಣಿ ರತ್ನಮ್ಮನು ಹೊನ್ನ ಪುತ್ಥಳಿಯಂತೆ ರೂಪುಳ್ಳ ರಾಮನನ್ನು ಕಣ್ಣಾರೆ ನೋಡಿ ಹಿಗ್ಗಿ ಮನಸೋತಳು. ದುರ್ದೈವದಿಂದ ಚೆಂಡು ಪುಟಿದು ರತ್ನಮ್ಮನ ಮನೆಯಲ್ಲಿ ಬಿದ್ದಿತು ಯಾರು ಹೋದರೂ ಮುತ್ತಿನ ಚೆಂಡು ಮರಳಿ ಸಿಕ್ಕಲಿಲ್ಲ. "ನನ್ನ ಮಗ ರಾಮನೇ ಬಂದು ಕೇಳಿದ ಹೊರತು ಚೆಂಡು ಕೊಡುವದಿಲ್ಲ." ಎಂದವಳು ಹೇಳಿದಳು. ಕೊನೆಗೆ ರಾಮನೇ ಹೋದನು ರತ್ನಮಾಜಿ ಹೇಯವಾದ ಕಾಮ ಶೃಂಗಾ ರವನ್ನು ತೋರಿಸಿ ಅವನನ್ನು ದುರ್ಮಾರ್ಗಪಾರಕ್ಕೆ ಬಲಾತ್ಕರಿಸಿದಳು ರಾಮನು ಗಾಬರಿಯಾಗಿ ಅಳೆಯನ್ನು ನೂಕಿ ಹೊರಕ್ಕೆ ನೆಗೆದು ಪಾರಾಗಿ ಓಡಿ ಹೋದನು

ಆದರೆ ಗಾಯಗೊಂಡ ಸರ್ಪಿಣಿಯಂತಿದ್ದ ರತ್ನಮ್ಮನು ರಾಮನ ಮೇಲೆ ಸೇಡು ತೀರಿಸಿಕೊಳ್ಳಲು ಕಂಪಿಲರಾಯನೆದುರು 'ನಿನ್ನ ಮುದ್ದು ಮಗ ರಾಮನು ಇಂದು ಮನೆಹೊಕ್ಕು ನನ್ನ ಮೇಲೆ ಬಲಾತ್ಕಾರ ಮಾಡಿದ ಎಂದು ಗೋಳಿಟ್ಟಳು. ಕೋಪಾಂಧನಾದ ದೊರೆ ಮಂತ್ರಿ ಬೈಚಪ್ಪನಿಗೆ ರಾಮನ ತಲೆಕಡಿದು ಹಾಕಲು ಅಜ್ಞಾಪಿಸಿದನು. ಚತುರನಾದ ಮಂತ್ರಿ ರಾಮನ ಪ್ರತಿರೂಪಿನಂತಿದ್ದ ಇನ್ನೊಬ್ಬನ ತಲೆಯನ್ನು ತೋರಿಸಿ, ರಾಮ ನನ್ನು ಬೈಚಿಟ್ಟನು. ಭೀಷ್ಮ ಪರಾಕ್ರಮಿಯಾದ ರಾಮನಿಲ್ಲದ ರಾಜ್ಯವು ದುರ್ಬಲವಾಯಿತು ರಾಮನು ಸತ್ತಸುದ್ದಿಯನ್ನು ಕೇಳಿ ದಿಲ್ಲಿಯ ಸುಲ್ತಾ

ನನು ನೇಮಿಖಾನನೆಂಬ ಪರಾಕ್ರಮಿಯಾದ ಸೇನಾಪತಿಯನ್ನು ಒಂದು ದೊಡ್ಡ ಸೈನ್ಯದೊಂದಿಗೆ ಕಳಿಸಿದನು. ಉನ್ಮತ್ತನಾದ ನೇಮಿಯು ಕೋಲ್ಹಾಪುರವನ್ನೆಬ್ಬಿಸುತ್ತ ಕುಮ್ಮಟದುರ್ಗವನ್ನು ಮುತ್ತಿದನು. ದುರ್ಬಲನಾದ ದೊರೆ ಗಾಬರಿಯಾದನು. ರಾಮನನ್ನು ನೆನಸಿ ಗೋಳಿಟ್ಟನು.

ಇತ್ತ ಮಂತ್ರಿಯು ರಾಮನಲ್ಲಿಗೆ ಬಂದು, ವಿಪತ್ತಿನಲ್ಲಿ ದುರ್ಗವನು ಕಾಪಾಡು ಎಂದು ಪ್ರಾರ್ಥಿಸಲು, ರಾಮತೀರ್ಥನು ಒಪ್ಪಿ ಯುದ್ಧಕ್ಕೆ ಸನ್ನದ್ಧನಾದನು.

ಅರಮನೆಯಲ್ಲಿ ಚೆನ್ನಿಗರಾಮನ ಯುದ್ಧದ ಸಿಂಗಾರವು ಈ ಅನತರ ಹೆಕೆಯಲ್ಲಿ ವರ್ಣಿತವಾಗಿದೆ.

**ಟಿಪ್ಪಣಿ:—**

ಗಗ್ಗರ; ಬೆಳ್ಳಿಯ ಪೊಳ್ಳಾದ ಕಡಗ.

ಹಲ್ಲಣ; ಟೊಂಕಕ್ಕೆ ಕಟ್ಟಿದ ಪಟ್ಟಿ.

ತಳಪುರನ್ನದ ಪಟೆ; ಹೊಳೆಯುವ ರತ್ನದ ಕತ್ತಿ.

(ತಳಪು; ಹೊಳೆ)

ಪಟೆ; ಕತ್ತಿ.

ಹೊಕ್ಕಲಿಕ್ಕು; ನಾಶಮಾಡು

ಫೌಜು; ಸೈನ್ಯ.

ಮೂದಲಿಸು; ಮನಸ್ಸಿಗೆ ಹತ್ತುವಂತೆ ಮಾತಾಡು.

ಯಕಟಿಗ; ಶೂರ.

ತಾಮುಸಮಾಡು, ವೈಗಳ್ತನ ಮಾಡು

ಹುಲ್ಲು ಕಚ್ಚು, ಹುತ್ತವೇರು, ನೀರಲ್ಲಿ ನಿಲ್ಲು—ವೈರಿಗಳು ಸೋತೆವೆಂದು ಹೇಳುವ ರೀತಿಯು. ಹಾಗೆ ಮಾಡಿದಲ್ಲಿ ಪ್ರತಿಸ್ಪರ್ಧಿಗಳು ಅವರನ್ನು ಕೊಲ್ಲುತ್ತಿದ್ದಿಲ್ಲ.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

(೧) ಕುಮಾರ ರಾಮನು ಯುದ್ಧಕ್ಕೆ ಸಿದ್ಧನಾದ ರೀತಿಯನು ವರ್ಣಿಸಿರಿ.

(೨) ಕುಮಾರ ರಾಮನ ಫೌಜಿನಲ್ಲಿ ಯಾವ ಯಾವ ಜಾತಿಯ ಜನರು ಸೇರಿದರು ? ಇದರಿಂದ ಕನ್ನಡಿಗರ ಯಾವ ಹಿರಿಯ

ಗುಣವು ಗೊತ್ತಾಗುತ್ತದೆ ?

(೩) ರಾಮುನ ಶೂರತನದ ಕೃತಿಯನ್ನು ವರ್ಣಿಸಿರಿ.

(೪) ಮಹಾಭಾರತದಲ್ಲಿ ಬಾಲಶೂರರ ಹೆಸರುಗಳನ್ನು ಕೇಳಿರುವಿರಾ ? ಅವರು ಯಾರು ? ಅವರು ಮಾಡಿದ ಕೆಲಸವೇನು ?

**ಸ್ಪಷ್ಟೀಕರಿಸಿರಿ:—**

"ಕಂಗೆಟ್ಟಿರುವ ಕಳ್ಳರು ಕನ್ನವನಿಕ್ಕಿ ಮನೆಯನ್ನು ಹೊಕ್ಕು ಕೆಮ್ಮಿದಂತಾಯಿತು ನಮ್ಮ ಪಾಡು."

**ವ್ಯಾಕರಣ:—**

**ಕರ್ಮಣಿ ಪ್ರಯೋಗದಲ್ಲಿ ಬರೆಯಿರಿ:—**

(೧) ಅರಸುಗುವರ ಚೆನ್ನಿಗ ರಾಮುನು ಮುತ್ತಿನ ಬಾಸಿಂಗಗಳನ್ನು ಧರಿಸಿದನು.

(೨) ಸುಲ್ತಾನನ ಮಂತ್ರಿ ಸೇವಿುಯು ದಂಡಿಗೆ ಎದುರು ಫೌಜನ್ನು ನಿರ್ಮಿಸಿದನು.

(೩) ಬಾದೂರಖಾನನು ಶತ್ರುಗಳ ದಂಡಿನ ಮೇಲೆ ಬಿದ್ದು ಅವನನ್ನು ಮೂದಲಿಸಿದನು.

**ಕರ್ತರೀ ಪ್ರಯೋಗದಲ್ಲಿ ಬರೆಯಿರಿ:—**

(೧) ಧೀರ ಬಾದೂರಖಾನನೆಂದು ಅವರೆಲ್ಲರಿಂದ ಹೊಗಳಲ್ಪಟ್ಟನು.

(೨) ಇನ್ನೊಂದು ದಿಕ್ಕಿನಲ್ಲಿ ಹೊಸರಾಹುತನ ಪರಿವಾರದಿಂದ ಶತ್ರುಗಳ ತಲೆಗಳೆಲ್ಲ ಸವರಲ್ಪಟ್ಟವು.

(೩) ಒಂದು ಕಣದಲ್ಲಿ ಕಡಲೆಯ ರಾಶಿಯು ಬಿಡಲ್ಪಟ್ಟಿತ್ತು.

**ಕೆಳಗಿನ ನಾಣ್ಣುಡಿಗಳನ್ನು ಪೂರ್ಣಮಾಡಿರಿ:**

(೧) ಹಂಗಿನಾ ಮನೆಗಿಂತಾ

(೨) ಕತ್ತೆಯೇನು ಬಲ್ಲದು .. ........

(೩) ಗೋಡೆಕಟ್ಟಿ......

(೪) ಮಾತು ಬಂದಾಗ... .......

(೫) ಅಡಿಕೆಗೆ ಹೋದ ಮಾನ.. ......



# ೯. ಶಪಥವು

ಬ್ರಹ್ಮಚಾರಿಯು ಅಲ್ಲಿ ನಿಂತು "ಆರಮೊಗಾ ಆರಮೊಗಾ" ಎಂದು ಮೆಲ್ಲಗೆ ಕೂಗಿದನು ಕೂಡಲೆ ಗಿಡಗಂಟೆಗಳನ್ನು ಓರೆ ಮಾಡಿ ಅಲ್ಲಿ ಅಡಗಿದ್ದ ಗುಹಾಮುಖದಿಂದ ಆರಮೊಗನು ಹೊರ ಬಿದ್ದು ಬಂದನು.

ಈ ಆರಮೊಗನಿಗೆ ಒಂದೇ ಮೊಗವಿದ್ದರೂ ಅದೊಂದೇ ಆರು • ಮೊಗಗಳಿಗೆ ಸರಿಯಾಗಿತ್ತು. ಹಂಪೆಯ ಉದ್ದನ ವೀರಭದ್ರನಿಗಿಂತಲೂ ಇವನು ಎತ್ತರವಾಗಿ ಕಂಡನಲ್ಲದೆ, ಅವನ ದೇಹವು ಮಾಂಸದಿಂದ ಒಳಿತಾಗಿ ತುಂಬಿಕೊಂಡಿತ್ತು ಅವನ ಭವ್ಯವಾದ ದೇಹವೂ, ಶಾಲಿಗ್ರಾಮದಂತೆ ಮಿರಿ ಮಿರಿ ಮಿಂಚುವ ಅವನ ಕಪ್ಪು ಬಣ್ಣವೂ, ಭವ್ಯನಾದ ಕವಡೆಗಳಂತೆ ಕಾಣುವ ಅವನ ಗುಳ್ಳೆಗಣ್ಣುಗಳೂ, ಅವನು ಹಿಡಿಂಬಾ ಮಾತೆಯ ಜೇಷ್ಠ ಪುತ್ರನೇ ಎಂದು ಹೇಳುತ್ತಿದ್ದವು ಬ್ರಹ್ಮಚಾರಿಯ ಆಜ್ಞೆಯ ಮೇರೆಗೆ ಆರಮೊಗನು ಯದುರಾಜ ಕೃಷ್ಣರಾಜರ ಕುದುರೆಗಳನ್ನು ಅಟ್ಟದ ಮರೆಯಲ್ಲಿ ಇದ್ದ ಸ್ಥಳದಲ್ಲಿ ಕಟ್ಟಿ, ಅವುಗಳಿಗೆ ಹುಲ್ಲನ್ನು ತಂದು ಹಾಕುವ ಕೆಲಸದಲ್ಲಿ ತೊಡಗಿದನು ಬ್ರಹ್ಮಚಾರಿಯು ಯದುರಾಜ - ಕೃಷ್ಣರಾಜರನ್ನು ಕರೆದುಕೊಂಡು ಗುಹೆಯಲ್ಲಿ ಸೇರಿದನು. ಒಳಗೆ ಹೋದಕೂಡಲೆ ಅಲ್ಲಿ ಒಂದು ವಿಸ್ತಾರವಾದ ಪಡಸಾಲೆಯಂತಹ ಸ್ಥಳವಿತ್ತು. ಒಂದು ಮೂಲೆಯಲ್ಲಿ ಆರಮೊಗನು ಹಾಸಿಕೊಂಡ ತೆಂಗಿನ ಚಾಪೆಯೂ, ಸಶಕ್ತನಾದ ಮನುಷ್ಯನಿಗೆ ನೆಗಹದಂತಹದೊಂದು ಖಡ್ಗವೂ ಕಂಡುವಲ್ಲದೆ ಅಲ್ಲಿ

ಮತ್ತೇನೂ ಇದ್ದಿಲ್ಲ. ಆರವೊಗನು ಬರುವವರೆಗೆ ಬ್ರಹ್ಮಚಾರಿಯು ಯದುರಾಜ-ಕೃಷ್ಣರಾಜರನ್ನು ನಿಲ್ಲಿಸಿಕೊಂಡು ನಿಂತು, ಅವನು ಬಂದ ಕೂಡಲೆ ಅವನ ಸ್ಥಳವನ್ನು ಅವನಿಗೆ ಒಪ್ಪಿಸಿ, ಒಳಗೆ ಹೋಗುವ ಬಾಗಿಲವನ್ನು ತೆಗೆದುಕೊಡೆಂದು ಹೇಳಿದನು. ಆರವೊಗನು ಹಾರೆಯನ್ನು ತೆಗೆದುಕೊಂಡು ಪ್ರಚಂಡವಾದ ಒಂದು ಬಂಡೆಯನ್ನು ಮೀಟಿ ಸರಿಸಿದನು. ಇಂತಹ ಅಮಾನುಷವಾದ ಕದವನ್ನು ಆರವೊಗನು ತೆಗೆದ ಕೂಡಲೇ, ಬ್ರಹ್ಮಚಾರಿಯು ತನ್ನ ಜೊತೆಗಾರರನ್ನು ಕರೆದುಕೊಂಡು ಒಳಗೆ ಹೋದನು.

ಅಲ್ಲಿಯೂ ಒಂದು ಪ್ರಶಸ್ತವಾದ ನಡುಮನೆಯಿತ್ತು ಆ ಸ್ಥಳದಲ್ಲಿ ಗಟ್ಟಿಗರಾದ ನಾಲ್ವತ್ತು, ಐವತ್ತು ಜನ ಬಂಟರು ತಮಗೆ ಬೇಕು ಬೇಕಾದ ಹಾಗೆ ಕುಳಿತು ಕೊಂಡಿದ್ದರು ಕೆಲವರು ಶಸ್ತ್ರಗಳಿಗೆ ಸಿಕಲಿಯನ್ನು ಮಾಡುತ್ತಿದ್ದರು. ಕೆಲವರು ಬಿಲ್ಲುಗಳನ್ನು ಕಟ್ಟುತ್ತಿದ್ದರು; ಕೆಲವರು ನಿಡಿದಾದ ಕೋಲುಗಳಿಗೆ ಬರ್ಚಿಯ ಮೊನೆಗಳನ್ನು ಜೋಡಿಸುತ್ತಿದ್ದರು ಕೆಲವರು ಕತ್ತಿಗಳನ್ನು ತಿರುವುತ್ತಿದ್ದರು. ಬ್ರಹ್ಮಚಾರಿಯನ್ನೂ ಅವನ ಸಂಗಡಲಿದ್ದ ವೀರಶಿರೋಮಣಿಗಳನ್ನೂ ಕಂಡಕೂಡಲೆ, ಅವರೆಲ್ಲರೂ ಮರ್ಯಾದೆಯಿಂದ ಎದ್ದುನಿಂತು ಪ್ರಣಾಮ ಮಾಡಿದರು ಒಂದು ಮೂಲೆಯಲ್ಲಿದ್ದ ಗಡಗಂಚಿಯ ಮೇಲೆ ಖಡ್ಗಗಳನ್ನು ಸುಡುಸೂಡಾಗಿ ಕಟ್ಟಿ ಇಟ್ಟಿದ್ದರು. ಅಲ್ಲಲ್ಲಿ ಬಾಣಗಳ ಮೊನೆಗಳಿಂದ ತುಂಬಿದ ಪುಟ್ಟಿಗಳಿದ್ದವು. ಇದೆಲ್ಲವನ್ನು ಕಂಡು ಯದುರಾಜನು ಬ್ರಹ್ಮಚಾರಿಯನ್ನು ಕುರಿತು "ಸ್ವಾಮಿಗಳೇ, ನೀವಾರೆಂಬುದೂ, ಆವ ಉದ್ಯೋಗವನ್ನು ನಡೆಯಿಸಿರುವಿರೆಂಬುದೂ ನನಗೆ ತಿಳಿದು ಹೋಯಿತು," ಎಂದು ನುಡಿದು ನಕ್ಕನು. ಬ್ರಹ್ಮಚಾರಿಯು ಮುಗುಳ್ನಗೆ ನಕ್ಕು, ಉತ್ತರವನ್ನು ಕೊಡದೆ ಸುಮ್ಮನಿದ್ದನು.

"ನಂಜಾ, ಒಳಗೆ ಹೋಗಬಹುದಷ್ಟೇ?" ಎಂದು ಬ್ರಹ್ಮಚಾರಿಯು ಅಲ್ಲಿಯ ಬಾಗಿಲ ಕಾಯುವವನನ್ನು ಕೇಳಿದನು ಅವನು

ಒಳಗೆ ಹೋಗಿ ಬಂದು "ಬುದ್ಧೀ, ದಯೆಮಾಡಿಸಿ", ಎಂದು ಹೇಳಿದನು.

ಬಳಿಕ ಆ ಮೂವರು ಒಳಗಿನ ಮನೆಯಲ್ಲಿ ಹೊಕ್ಕರು ಅಲ್ಲಿ ಏಳೆಂಟು ಜನ ಮಹನೀಯರು ರತ್ನಗಂಬಳಿಯ ಮೇಲೆ ಕುಳಿತು ಆಲೋಚನೆಯನ್ನು ಮಾಡುತ್ತಿದ್ದರು ಮಧ್ಯದಲ್ಲಿ ದಿಂಬಕ್ಕೆ ಆತುಕೊಂಡು ಅರುವತ್ತು ಅರುವತ್ತೈದು ವರ್ಷದ ತೇಜಸ್ವಿಯಾದ ಮುದುಕನು ಕುಳಿತು ಸ್ಪಷ್ಟವಾದ ವಾಣಿಯಿಂದ ಏನನ್ನೊ ಹೇಳು ತ್ತಿದ್ದನು. ಉಳಿದವರೆಲ್ಲರೂ ಅವನ ಮಾತಿಗೆ, "ಸರಿ, ಸರಿ ತಾವು ಹೇಳುವುದು ಯಥಾರ್ಥವು" ಎಂದು ತಲೆದೂಗುತ್ತಿದ್ದರು

ಆ ಮುದುಕನು ಯದುರಾಜನನ್ನು ಕಂಡು, ಆದರದಿಂದ ಅವನನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡನು ಕೃಷ್ಣರಾಜನೂ ಬ್ರಹ್ಮಚಾರಿಯೂ ಸಮೀಪದಲ್ಲಿಯೇ ಕುಳಿತುಕೊಂಡರು.

"ಶಾಮಯ್ಯಂಗಾರರೇ, ಈ ಮಹಾತ್ಮರೀರ್ವರೂ ಯದ ವಂಶ ಸಂಭವರಾದ ವೀರರು. ಇವರು ಯದುರಾಜರು, ಇವರು ಯದುರಾಜರ ತಮ್ಮಂದಿರಾದ ಕೃಷ್ಣರಾಜರು ಇವರೀರ್ವರೂ ಪ್ರತಾಪಶಾಲಿಯಾದ ಹರಿಹರ ರಾಜನ ಪ್ರೀತ್ಯಾಸ್ಪದರು" ಎಂದು ಬ್ರಹ್ಮಚಾರಿಯು ಹೇಳಿದನು.

"ಈ ಪುರುಷ ಸಿಂಹರ ಕೀರ್ತಿಯನ್ನು ನಾನು ಕೇಳಿದ್ದೇನೆ. ವಿಜಯನಗರದ ಮಹಾವೀರರಲ್ಲಿ ಯದುರಾಜರು ಅಗ್ರೇಸರರೆಂದು ನಾನು ಹರಿಹರ ರಾಜರ ಮುಖದಿಂದಲೇ ಕೇಳಿದ್ದೇನೆ. ಕೃಷ್ಣ ರಾಜರೂ ಕಡಿಮೆಯ ವೀರರಲ್ಲ. ಇಂತಹ ಮಹಾತ್ಮನನ್ನು ಪ್ರತ್ಯ ಕ್ಷವಾಗಿ ಕಂಡದ್ದು ಸುಯೋಗವೇ ಸರಿ" ಎಂದು ಶಾಮಯ್ಯಂಗಾ ರರು (ಆ ಮುದುಕನ ಹೆಸರು) ನುಡಿದರು.

"ಯದುರಾಜ, ಶಾಮಯ್ಯಂಗಾರರು ನಮ್ಮ ಚಾಮರಾಜರ ಪ್ರಧಾನರು. ಚಾಮರಾಜರಿಗೆ ಉಂಟಾದ ಅನರ್ಥವನ್ನು ನೀವು ಕೇಳಿರಬಹುದು" ಎಂದು ಬ್ರಹ್ಮಚಾರಿಯು ನುಡಿದನು

"ಆ ಖೇದಜನಕವಾದ ಸಂಗತಿಯನ್ನು ನಾನು ವಿಜಯನಗರ ದಲ್ಲಿರುವಾಗಲೇ ಕೇಳಿದೆನು. ಆ ವಾರ್ತೆಯನ್ನು ಕೇಳಿ ಹರಿಹರ ರಾಜರೂ ದುಃಖಿತರಾದರು" ಎಂದು ಕೃಷ್ಣರಾಜನೆಂದನು.

"ಹೀಗೆ ಒಮ್ಮಿಂದೊಮ್ಮೆಲೆ ರಾಜ್ಯಕ್ರಾಂತಿಯಾಗಬೇಕಾದರೆ ನಿಮ್ಮ ರಾಜ್ಯದಲ್ಲ ಅವ್ಯವಸ್ಥೆಯಿತ್ತೆಂದು ನಾನು ನಂಬುತ್ತೇನೆ" ಎಂದು ಯದುರಾಜನು ನುಡಿದನು.

"ಮಾರನಾಯಕನ ಕಕ್ಕನ ಮಗನೇ ನಮ್ಮ ರಾಜ್ಯದ ಸೇನಾಪತಿಯಾಗಿದ್ದನು ಅವನು ಆ ದುರುಳನಿಗೆ ಅನುಕೂಲ ನಾಗಿ ಒಂದೇ ದಿವಸದಲ್ಲಿ ಈ ಅನರ್ಥವನ್ನುಂಟುಮಾಡಿದನು. ಸೈನ್ಯವೆಲ್ಲ ಅವರಿಗೆ ಅನುಕೂಲ! ಮಾಡುವದೇನು? ಎಂದು ಬ್ರಹ್ಮ ಚಾರಿಯು ಹೇಳಿದನು

ಬಳಿಕ ಕೆಲವರು ಮಾರನಾಯಕನ ಪೂರ್ವದ ವೃತ್ತಾಂತ ವನ್ನು ಹೇಳಿ ಅವನ ಕೃತಘ್ನತೆಯನ್ನು ವಿಸ್ತಾರಮಾಡಿ ಹೇಳಿ ದರು ಕೆಲವರು ಚಾಮರಾಜರ ಒಳ್ಳೆಯ ಆಳಿಕೆಯನ್ನು ಕೊಂಡಾ ಡಿದರು. ಕೆಲವರು ರಾಜಪಕ್ಷದವರ ದುಃಸ್ಥಿತಿಯ ವರ್ಣನೆಯನ್ನು ಕೇಳಿದವರ ಮನಸ್ಸು ಕರಗುವಂತೆ ಮಾಡಿದರು.

"ಯದುರಾಜ, ನಾವೆಲ್ಲರೂ ರಾಜಪಕ್ಷದ ಮುಖ್ಯಸ್ಥರು; ಮಾರನಾಯಕನ ಬಾಧೆಗೆ ಅಂಜಿ, ಹೀಗೆ ಹುದುಗಿಕೊಂಡು ಕುಳಿತಿ ದ್ದೇವೆ, ನೋಡಿರಿ!" ಎಂದು ಶಾಮಯ್ಯಂಗಾರರು ಹೇಳಿದರು.

"ಹೀಗೆ ಎಲ್ಲಿಯ ವರೆಗೆ ಹುದುಗಿಕೆಂಡು ನೀವು ಇರತಕ್ಕ ವರು? ಇದಕ್ಕಿಂತಲೂ ಮಾರನಾಯಕನ ಪಾರುಪತ್ಯವನ್ನು ಮಾಡುವದಕ್ಕೆ ಹಂಚಿಕೆಯನ್ನು ಮಾಡಬಾರದೆ?" ಎಂದು ಯದು ರಾಜನು ಕೇಳಿದನು.

ಈ ಮಾತನ್ನು ಕೇಳಿ, ಅಲ್ಲಿ ಕುಳಿತವರೆಲ್ಲರಿಗೂ ಸಮಾ ಧಾನವೆನಿಸಿತು. ನಗೆಮೊಗದಿಂದ ಅವರು ಒಬ್ಬರನ್ನೊಬ್ಬರು ನೋಡಿ

ದರು. ಬಳಿಕ ಶಾಮಯ್ಯಂಗಾರರು, "ನಾವೆಲ್ಲರೂ ಆ ಪ್ರಯತ್ನ ದಲ್ಲಿಯೇ ಇದ್ದೇವೆ" ಎಂದರು.

"ಅವಶ್ಯವಾಗಿ ಪ್ರಯತ್ನವನ್ನು ಮಾಡಿರಿ. ನಿಮ್ಮ ರಾಜನನ್ನು ಕೊಂದು ಮಾರನಾಯಕನು ಸಿಂಹಾಹಸನವನ್ನು ಆಕ್ರಮಿಸಿಕೊಂಡಿ ರಲು ನೀವು ಹೇಡಿಗಳಂತೆ ಸುಮ್ಮನೆ ಹೀಗೆ ಅಡಗಿಕೊಂಡು ಕುಳಿತರೆ, ಲೋಕದ ಜನರು ನಿಮಗೆ ಅಪವಾದವನ್ನು ಕೊಡಲಿ ಕ್ಕಿಲ್ಲವೆ?" ಎಂದು ಯದುರಾಜನು ಗಟ್ಟಿಸಿ ಕೇಳಿದನು.

"ಸರಿ, ಸರಿ, ಯದುರಾಜರೆ, ನೀವು ಚೆನ್ನಾಗಿ ಮಾತ ನಾಡಿದಿರಿ!" ಎಂದು ನುಡಿದವನೇ ಬ್ರಹ್ಮಚಾರಿಯು ತಾನು ಹೊದ್ದುಕೊಂಡಿದ್ದ ಶಾಟಿಯಿಂದ ತನ್ನ ಮೋರೆಯ ಬೂದಿಯನ್ನು ಅಳಿಸಿ ಆ ಶಾಟಿಯನ್ನು ಚೆಲ್ಲಿ ನಿಂತುಕೊಂಡನು ಯದುರಾಜನು ಅವನನ್ನು ದಿಟ್ಟಿಸಿ ನೋಡಿ "ನಂಜರಾಜ!" ಎಂದು ಆಶ್ಚರ್ಯ ದಿಂದ ಉದ್ಗಾರ ತೆಗೆದನು. ನಂಜರಾಜನು (ಆ ಬ್ರಹ್ಮಚಾರಿಯು, ವೇಷ ತಾಳಿದ ನಂಜರಾಜನೇ) ಯದುರಾಜನ ಬಳಿಗೆ ಬಂದು ಅವನ ಕೈಹಿಡಿದು, ವೀರ ಶಿರೋಮಣಿಯೇ, ನಾನು ನಂಜರಾ ಜನೇ ಅಹುದು; ಈ ರಾಜ್ಯಕ್ಕೆ ಬಂದ ದುಃಸ್ಥಿತಿಯನ್ನು ದೂರ ಮಾಡಲು ಅರಿಯದ ಅಧಮನಾದ ನಾನು ನಿಮ್ಮ ಸಮ್ಮುಖದಲ್ಲಿ ನಿಂದಿರಲು ಕೂಡ ಯೋಗ್ಯನಲ್ಲ." ಎಂದು ವ್ಯಸನದಿಂದ ಕೆಳ ಮೋರೆಯನ್ನು ಮಾಡಿಕೊಂಡು ನಿಂತನು

"ನಂಜರಾಜ, ನೀವು ಅಧಮರಲ್ಲ; ಹೇಡಿಗಳೂ ಅಲ್ಲ. ವಿಜಯನಗರದಲ್ಲಿ ನಾವೂ ನೀವೂ ಕೂಡಿಯೇ ಯುದ್ಧಕಲೆಯನ್ನು ಕಲಿತವರು. ನಿಮ್ಮ ಪರಾಕ್ರಮವನ್ನು ನಾನು ಅರಿಯೆನೆ? ಭಗವ ದಿಚ್ಛೆಗೆ ಹಾಗೆ ಬಂದಿತು. ನೀವೇನು ಮಾಡುವಿರಿ?" ಎಂದು ಯದುರಾಜನು ನಂಜರಾಜನನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿ ಕೊಂಡು ಕುಳಿತನು.

"ನಂಜರಾಜ, ನೀವೂ ಯದುರಾಜರೂ ಸ್ನೇಹಿತರಾದ ಬಳಿಕ ನಮ್ಮ ಅಂತಸ್ಥ ಕಾರ್ಯಗಳನ್ನು ಇವರೊಡನೆ ನಂಬುಗೆಯಿಂದ ಆಲೋಚಿಸಲು ಇನ್ನಾವ ಅಡ್ಡಿಯೂ ಕಾಣುವದಿಲ್ಲ'' ಎಂದು ಶ್ಯಾಮಯ್ಯಂಗಾರರು ನುಡಿದರು.

"ಏನೂ ಅಡ್ಡಿಯಿಲ್ಲ; ಅಯ್ಯಂಗಾರರೆ, ಈ ಪರಾಕ್ರಮಿಗಳು ದೇವರ ಅನುಗ್ರಹದಿಂದಲೇ ನಮಗೆ ದೊರೆತಿರುವರು.'' ಎಂದು ನಂಜರಾಜನು ಹೇಳಿದನು.

"ಯದುರಾಜರೇ, ನೀವು ನಮ್ಮ ಪಕ್ಷಕ್ಕೆ ಅನುಕೂಲರಾಗಿ ನಮಗೆ ಸಹಾಯವನ್ನು ಮಾಡಬೇಕೆಂದು ನಾವೆಲ್ಲರೂ ಪ್ರಾರ್ಥಿಸುತ್ತೇವೆ" ಎಂದು ಶ್ಯಾಮಯ್ಯಂಗಾರರು ಕೇಳಿಕೊಂಡರು.

"ಅಗತ್ಯವಾಗಿ ಮಾಡುತ್ತೇನೆ; ನನ್ನ ಮನಸ್ಸಿನಲ್ಲಿಯೂ ಒಂದಾವೃತ್ತಿ ಮಾರನಾಯಕನೊಡನೆ ಯುದ್ಧ ಮಾಡಬೇಕೆಂಬ ಕುತೂಹಲವು ನೆಲೆಗೊಂಡಿದೆ. ಅವನೂ ಒಳ್ಳೆಯ ಪರಾಕ್ರಮಿಯಾದ ವೀರನೆಂದು ಜನರು ಒಪ್ಪಿಕೊಳ್ಳುತ್ತಾರೆ. ಸಮರಾಂಗಣದಲ್ಲಿ ಅವನ ಪರಾಕ್ರಮವನ್ನು ಕಂಡು ಬಿಡುವ."

ಈ ಮಾತನ್ನು ಕೇಳಿ ಎಲ್ಲರೂ "ಸಾಧು! ಸಾಧು !" ಎಂದು ಕೂಗಿದರು, ಬಳಿಕ ಅಯ್ಯಂಗಾರನು ತನ್ನ ಪೆಟ್ಟಿಗೆಯೊಳಗಿದ್ದ ಬಂಗಾರದ ಸಂಪುಟನ್ನು ಹೊರಗೆ ತೆಗೆದು, "ಯದುರಾಜ, ಇದರಲ್ಲಿ ಶ್ರೀ ವೆಂಕಟೇಶನ ಪ್ರಸಾದವಿದೆ, ಈ ಪ್ರಸಾದವನ್ನು ನೀವು ಶಿರಸಾವಹಿಸಿ, ನಮ್ಮ ಕಾರ್ಯಕ್ಕೆ ನಿರ್ವಂಚನೆಯಿಂದ ಸಹಾಯವನ್ನು ಮಾಡುತ್ತೇವೆಂದೂ, ನಮ್ಮ ಕಾರ್ಯವೇ ನಿಮ್ಮ ಕಾರ್ಯವೆಂದು ತಿಳಿಯುತ್ತೇವೆಂದೂ ಶಪಥ ಮಾಡಿರಿ.

ನಿಮ್ಮಂತಹ ಮಹಾನುಭಾವರಿಗೆ ಅವಶ್ಯವಿಲ್ಲವಾದರೂ ಶಪಥವನ್ನು ಮಾಡಲೇಬೇಕೆಂದು ನಾವು ನಿರ್ಧರಿಸಿದ್ದೇವೆ ಅದಕ್ಕಾಗಿ ನೀವು ದಯಮಾಡಿ ಶಪಥ ಮಾಡಿರಿ" ಎಂದು ಹೇಳಿ, ಸಂಪುಟದೊಳಗಿನ ತುಲಸೀದಲಗಳನ್ನೂ, ಶ್ರೀಪಾದರೇಣುವನ್ನೂ, ಯದುರಾಜ—ಕೃಷ್ಣರಾಜರ ಕೈಯಲ್ಲಿ ಕೊಟ್ಟನು

ಬಳಿಕ ಅವರೀರ್ವರೂ ಮೇಲೆ ಹೇಳಿದಂತೆ ಶಪಥ ಮಾಡಿದರು. ತತ್‍ಕ್ಷಣವೇ ಎಲ್ಲರೂ ಎದ್ದು ನಿಂತು "ಜಯ ಬಲಭೀಮ ಜಯ ಬಲಭೀಮ!" ಎಂದು ಆರ್ಭಟೆಯಿಂದ ಕೂಗಿ ಜಯ ಘೋಷವನ್ನು ಮಾಡಿದರು. ಈ ಘೋಷವನ್ನು ಕೇಳಿ ಹೊರಗಿನ ಬಂಟರೆಲ್ಲರೂ "ಜಯ ಬಲಭೀಮ, ಹುಯ್ ಹಾ" ಎಂದು ತಮ್ಮ ಬಾಯಿಗೆ ಬಂದ ಹಾಗೆ ಕೂಗಿ ಉದ್ರೇಕದಿಂದ ಕುಣಿದಾಡಿದರು.

ಈ ಜಯೋದ್ರೇಕದ ಧ್ವನಿ- ಪ್ರತಿಧ್ವನಿಗಳೆಲ್ಲ ಅಡಗಿ ಹೋಗಿ ಮತ್ತೆ ಶಾಂತತೆಯುಂಟಾದ ಬಳಿಕ, "ಯದುರಾಜ, ನಿಮ್ಮ ನಿಶ್ಚಯವನ್ನು ಕೇಳಿ ನಮ್ಮೆಲ್ಲರಿಗೂ ಆನಂದವಾಗಿರುವದು ಇದೀಗಲೇ ಉಂಟಾದ ಜಯೋದ್ರೇಕದಿಂದ ತಾನೇ ವ್ಯಕ್ತವಾಗಿರುವುದು ನೀವಿನ್ನು ನಮ್ಮ ಅಗ್ರೇಸರರು ಮುಂದಿನ ಆಲೋಚನೆಗಳೆಲ್ಲ ನಿಮ್ಮ ಮತಾನುಸಾರವಾಗಿ ನಡೆಯುವವು" ಎಂದು ಅಯ್ಯಂಗಾರನು ಹೇಳಿದನು.

"ನಿಮ್ಮ ಬಹುಮಾನಕ್ಕೆ ನಾನು ಪಾತ್ರನಾಗಿರುವದನ್ನು ಕಂಡು ಧನ್ಯನಾಗಿರುವೆನು." ಎಂದು ಯದುರಾಜನು ನುಡಿದನು.

"ಏಳಿರಿನ್ನು ತೀರ ಸಂಜೆಯಾಯಿತು. ಯದುರಾಜ-ಕೃಷ್ಣರಾಜರು ಹಸಿದಿರುವರಾದೀತು, ಉಪಹಾರವನ್ನು ಮಾಡೋಣ. ನಾಳೆಯ ಬೆಳಗಿನಲ್ಲಿ ನಮ್ಮ ಆಲೋಚನೆಗಳನ್ನೂ ಉಪಾಯಗಳನ್ನೂ ಯದುರಾಜರಿಗೆ ತಿಳುಹುವ" ಎಂದು ನಂಜರಾಜನೆಂದನು. ಬಳಿಕ ಎಲ್ಲರೂ ಗುಹೆಯಿಂದ ಹೊರಬಿದ್ದು, ಬೆಳದಿಂಗಳಲ್ಲಿ ಕುಳಿತು, ಆನಂದದಿಂದ ಹರಟೆಯನ್ನು ಹೊಡಯುತ್ತ ಉಪಹಾರವನ್ನು ಮಾಡುವವರಾದರು

—ಕೆರೂರ ವಾಸುದೇವಾಚಾರ್ಯರು

# ಪರಿಚಯ.

ದಿವಂಗತ **ಕೆರೂರ ವಾಸುದೇವಾಚಾರ್ಯರು** ಉತ್ತರ ಕರ್ನಾಟಕದಲ್ಲಿ ಸುಮಾರು ನಾಲ್ವತ್ತು ವರುಷಗಳ ಹಿಂದೆ ಕನ್ನಡದಲ್ಲಿ ಲಲಿತ ಸಾಹಿತ್ಯವನ್ನು ನಿರ್ಮಿಸುವ ಕಾರ್ಯವನ್ನು ನಿರ್ವಹಿಸಿ ಕೀರ್ತಿವೆತ್ತವರು. ಬಾಗಿಲುಕೋಟೆಯಲ್ಲಿ ಸಂಸ್ಕೃತ ಭಾಷಾ ಪಾಂಡಿತ್ಯದಿಂದ ಹಲವು ತಲೆಮಾರುಗಳಿಂದಲೂ ಪ್ರಖ್ಯಾತವಾದ ಆಚಾರ್ಯ ಮನೆತನದಲ್ಲಿ ಹುಟ್ಟಿದವರು. ಸಂಸ್ಕೃತ, ಆಂಗ್ಲ ಕನ್ನಡ ಭಾಷೆಗಳಲ್ಲಿ ಇವರಿಗೆ ಪ್ರಾವೀಣ್ಯವಿತ್ತು. ೧೯೦೮ರಲ್ಲಿ ಪ್ರಕಟಿಸಿದ 'ಇಂದಿರಾ' ಕಾದಂಬರಿಯು ಕನ್ನಡದಲ್ಲಿ ಮೊದಲನೆಯ ಸ್ವತಂತ್ರ ಸಾಮಾಜಿಕ ಕಾದಂಬರಿಯೆಂದರೂ ತಪ್ಪಾಗದು. 'ಯದುಮಹಾರಾಜ' ಇದು ಇವರ ಐತಿಹಾಸಿಕ ಕಾದಂಬರಿ. ಇವರ ಶೈಲಿ ಸಂಸ್ಕೃತ ಪ್ರಚುರವಾದರೂ ಬಲು ತಿಳಿಯಾದದ್ದು. ಇವರು ಉತ್ತಮ ಕಾದಂಬರಿಕಾರರಿದ್ದಂತೆಯೆ ಪ್ರತಿಭಾವಂತರಾದ ನಾಟಕಕಾರರೂ ಆಗಿದ್ದರು ಆಂಗ್ಲ ಭಾಷೆಯಿಂದ ಕೆಲವು ನಾಟಕಗಳನ್ನು ಸ್ವತಂತ್ರ ಕೃತಿಗಳೇ ಎನ್ನುವಷ್ಟು ಪ್ರಭಾವಯುತವಾಗಿ ಇವರು ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಶೆಕ್ಸಪಿಯರನ Merchant of Venice ವನ್ನು 'ಸುರತ ನಗರದ ಶ್ರೇಷ್ಠಿ' ಎಂದೂ ಮತ್ತು Mid-Summer Night's Dream ಇದನ್ನು ವಸಂತಯಾಮಿನೀ ಸ್ವಪ್ನ ಚಮತ್ಕಾರ' ವೆಂದೂ ಹೆಸರಿಟ್ಟು ಪರಿವರ್ತಿಸಿದ್ದಾರೆ 'ನಲದಮಯಂತಿ' ಇದು ಇವರ ಸ್ವತಂತ್ರವಾದ ನಾಟಕ. ಇವರ ನೀಳ್ಗತೆಗಳು, ನಾಟಕಗಳು ಇಂದಿಗೂ ಲೋಕಪ್ರಿಯವಾಗಿವೆ. ಕನ್ನಡ ಅಭ್ಯಾಸಕ್ಕೆ, ಬರೆವ ಹದವನ್ನು ಪಡೆಯುವದಕ್ಕೆ ಇವರ ಗ್ರಂಥಗಳನ್ನು ವಿದ್ಯಾರ್ಥಿಗಳು ಅವಶ್ಯವಾಗಿ ಓದಬೇಕು. ವಾಸುದೇವಾಚಾರ್ಯರು ಉತ್ತರ ಕರ್ನಾಟಕಕ್ಕೆಯೆ ಭೂಷಣಪ್ರಾಯರಾದ ಹೊಸಗನ್ನಡದ ಬರಹ

ಗಾರರಲ್ಲಿ ತಮ್ಮದೇ ಆದ ಒಂದು ಸ್ಥಾನವನ್ನು ಗಳಿಸಿದ್ದಾರೆ. ಇವರ ಸುಪ್ರಸಿದ್ಧ ಐತಿಹಾಸಿಕ ಕಾದಂಬರಿಯಾದ 'ಯದುಮಹಾರಾಜ' ದಿಂದ ಈ ಭಾಗವನ್ನು ಆಯ್ದುಕೊಂಡಿದೆ

**ಕಥಾಸಂದರ್ಭ: —**

ಶಾಲಿವಾಹನ ಶಕೆ ೧೩೨೦ (ಕ್ರಿ. ಶ ೧೩೯೮)ರ ಸುಮಾರಕ್ಕೆ ಮೈಸೂರಲ್ಲಿ ವೃದ್ಧ ಚಾಮರಾಜರು ಅರಸರಾಗಿದ್ದರು. ಇವರಿಗೆ ಗಂಡುಮಕ್ಕಳಿರಲಿಲ್ಲ. ದೇವಕೀದೇವಿಯೆಂಬ ಒಬ್ಬ ಮಗಳು ಮಾತ್ರ ಇದ್ದಳು. ಅರಸರು ಅತ್ಯಂತ ಧರ್ಮನಿಷ್ಠರೂ ದಯಾಳುಗಳೂ ಆಗಿದ್ದರು. ತಮ್ಮ ಆಶ್ರಯ್ಯದವರಲ್ಲೊಬ್ಬರ ಮಗನಾದ ಮಾರನಾಯಕನನ್ನು ಬಾಲ್ಯದಿಂದ ಮಗನಂತೆ ಬೆಳೆಸಿದ್ದರು. ಮಾರನಾಯಕನು ಪ್ರಾಯಕ್ಕೆ ಬಂದ ಮೇಲೆ ವಿಜಯನಗರ ರಾಜ್ಯದಲ್ಲಿ ಕೆಲಸ ಗಳಿಸಿ ಕುರುಹಳ್ಳಿಯ ಪಾಳೆಯಗಾರನಾಗಿದ್ದನು. ಚಾಮರಾಜರ ದಾಯಾದರಲ್ಲಿ ಶಾಂತ ರಾಜನೂ ನಂಜರಾಜನೂ ಮುಖ್ಯರು. ಶಾಂತ ರಾಜನು ಅವಿವೇಕಿಯೂ, ಕಾಮುಕನೂ, ದುರಾಶೆಯುಳ್ಳವನೂ ಆಗಿದ್ದನು. ಅವನ ದುರ್ಬೋಧನೆಯಿಂದ ಮಾರನಾಯಕನು ಮೈಸೂರನ್ನು ಆಕ್ರಮಿಸಿ ಅರಮನೆಯನ್ನು ಹೊಕ್ಕು ಹತ್ಯಾಕಾಂಡವನ್ನೇ ನಡೆಯಿಸಿದನು ಈ ಕೊಲೆಯನ್ನು ನೋಡಿ ವೃದ್ಧ ಚಾಮರಾಜರು ದೇವಾಯತನವನ್ನು ಸೇರಿ ಅಲ್ಲಿಯೇ ಪ್ರಾಣಬಿಟ್ಟರು ಮಾರನಾಯಕನು ತಾನು ಮೈಸೂರಿಗೆ ರಾಜನೆಂದು ಸಾರಿದನು. ಚಾಮರಾಜರ ಕುಟುಂಬದವರನ್ನು ಅರಮನೆಯಲ್ಲಿಯೇ ಬಂಧನದಲ್ಲಿಟ್ಟನು. ಚಾಮರಾಜರ ಮಗಳಾದ ದೇವಕೀದೇವಿಯನ್ನು ತಾನು ಮದುವೆಯಾದರೆ ಮೈಸೂರ ಅರಸುಮನೆತನ ತನ್ನದಾಗುವದೆಂದು ನೆನೆಸಿದನು ಅರ್ಧರಾಜ್ಯದ ಆಶೆಯಿಂದ ಶಾಂತರಾಜನೂ ಇದಕ್ಕೆ ಒಪ್ಪಿದನು. ಇದರಿಂದ ಮಹಾರಾಜ್ಞಿಯವರಿಗೂ ದೇವಕೀ ದೇವಿಗೂ ದಿಕ್ಕು ತೋರದಂತಾಯಿತು. ಇತ್ತ ಪ್ರಧಾನ ಶಾಮಯ್ಯಂಗಾರರೇ ಮೊದಲಾದ ರಾಜಪಕ್ಷದ ಜನರು ಮೈಮರಸಿಕೊಂಡು ಮಾರನಾಯಕನ ಮೇಲೆ ಸೇಡು ತೀರಿಸುವ ಎತ್ತುಗಡೆ ಮಾಡತೊಡಗಿದರು. ಅವರ ಕಾರಸ್ಥಾನಗಳು ಕಾಡಿನ ಒಂದು ಗುಹೆಯಲ್ಲಿ ಗುಪ್ತವಾಗಿ ಸಾಗತೊಡಗಿದವು. ಚಾಮರಾಜರ ದೂರ ಬಂಧುವರ್ಗದ ನಂಜರಾಜನು ಈ ಪಕ್ಷವನ್ನು ಕೂಡಿದನು. ಆತನಿಗೆ ನಂಜುಂಡೇಶ್ವರ ದೇವಾಲಯದಲ್ಲಿ 'ಯದುವಂಶ ಸಂಭವರಾದ ಇಬ್ಬರು ರಾಜಪುತ್ರರು ಚಾಮುಂಡೇಶ್ವರಿ ದೇವಾಲಯಕ್ಕೆ ಬರುವರೆಂದೂ ಅವರು ಈ

ಕೆಲಸದಲ್ಲಿ ನೆರವಾಗುವರೆಂದೂ ಅವರಲ್ಲಿ ಹಿರಿಯರಾದ ಯದುರಾಜನನ್ನು ಮೈಸೂರ ರಾಜ್ಯಕ್ಕೆ ಪಟ್ಟಗಟ್ಟಬೇಕೆಂದೂ ಮತ್ತು ಅತನಿಗೆ ದೇವಕೀದೇವಿ ಯನ್ನು ಮದುವೆ ಮಾಡಿಕೊಡಬೇಕೆಂದೂ, ಸ್ವಪ್ನವಾಯಿತು ಆ ಪ್ರಕಾರ ನಂಜರಾಜನು ಬ್ರಹ್ಮಚಾರಿಯ ವೇಷದಲ್ಲಿ ಮಾರ್ಗಪ್ರತೀಕ್ಷೆ ಮಾಡುತ್ತಿರು ವಾಗ ಯದುರಾಜ ಕೃಷ್ಣರಾಜರು ಅಲ್ಲಿಗೆ ಬರುವರು. ನಂಜರಾಜನು ಅವರನ್ನು ಗುಹೆಗೆ ಕರೆದುಕೊಂಡು ಹೋಗುವನು ಅಲ್ಲಿ ಮಾರನಾಯಕನ ವಿರುದ್ಧ ಸಂಚನ್ನೆಲ್ಲ ಕೇಳಿ ಯದುರಾಜನು ಮುಂದಾಳ್ತನವನ್ನು ವಹಿ ಸಲು ಸಿದ್ಧನಾಗುವನು. ಆಗ ಅತನು ರಾಜಪಕ್ಷದ ಶಪಥವನ್ನು ತನ್ನನೊ ಡನೆ ತೆಗೆದುಕೊಳ್ಳುವನು.

**ಅಭ್ಯಾಸ:—**

## ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ:—

೧) ರಾಜಪಕ್ಷದವರ ಗುಪ್ತ ಚಟುವಟಿಕೆಗಳ ಕೇಂದ್ರವಾದ ಗುಹೆ ಯನ್ನು ಬಣ್ಣಿಸಿರಿ.

೨) ಶಾಮಯ್ಯಂಗಾರರಿಗೂ ಯದುರಾಜರಿಗೂ ನಡೆದ ಸಂಭಾಷಣೆ ಯನ್ನು ಸಂಗ್ರಹಿಸಿ ಬರೆಯಿರಿ.

೩) ನಂಜರಾಜನು ಯದುರಾಜ ಕೃಷ್ಣರಾಜರನ್ನು ಗುಹೆಗೆ ಕರೆ ದೊಯ್ದ ರೀತಿಯನ್ನು ಬಣ್ಣಿಸಿರಿ

೪) ಶಾಮಯ್ಯಂಗಾರ್ರ, ನಂಜರಾಜ, ಯದುರಾಜ, ಕೃಷ್ಣರಾಜ ಅರವೊಗ ಇವರ ಬಗ್ಗೆ ಎರಡೆರಡು ಮಾತುಗಳನ್ನು ಬರೆಯಿರಿ.

೫) ಇದೇ ತರದ ಪ್ರಸಂಗವನ್ನು ಬಣ್ಣಿಸುವ ಶ್ರೀ ಗಳಗನಾಥರ ಕಾದಂಬರಿಯಾದ ಈಶ್ವರೀ ಸೂತ್ರವನ್ನು ಓದಿರಿ

**ವ್ಯಾಕರಣ:—**

## ಕೆಳಗಿನ ಅವತರಣಗಳಲ್ಲಿ ವಿರಾಮಚಿಹ್ನೆಗಳನ್ನು ಉಪಯೋಗಿಸಿರಿ:—

ಅ) ನಂಜಾ ಒಳಗೆ ಹೋಗಬಹುದಷ್ಟೇ ಎಂದು ಬ್ರಹ್ಮಚಾರಿಯು ಅಲ್ಲಿಯ ಬಾಗಿಲ ಕಾಯುವವನನ್ನು ಕೇಳಿದನು ಅವನು ಒಳಗೆ ಹೋಗಿ ಬಂದು ಬುದ್ಧೀ ದಯಮಾಡಿಸಿ ಎಂದು ಹೇಳಿದನು

ಆ) ಯದುರಾಜ ನಾವೆಲ್ಲರೂ ರಾಜಪಕ್ಷದ ಮುಖ್ಯಸ್ಥರು ಮಾರ ನಾಯಕನ ಬಾಧೆಗೆ ಅಂಜಿ ಹೀಗೆ ಹುದುಗಿಕೊಂಡು ಕಾಳೆ ತಿದ್ದೇವೆ ನೋಡಿರಿ ಎಂದು ಶಾಮಯ್ಯಂಗಾರರು ಹೇಳಿದರು.

# ೧೦. ಧಾರವಾಡ

ವ್ಯಕ್ತಿಗಳಿಗೆ ದೈವಬಲವಿದ್ದಂತೆ ದೇಶಗಳಿಗೂ ದೈವಬಲವಿರುತ್ತದೆ; ಪಟ್ಟಣಗಳಿಗೂ ಇರುತ್ತದೆ. ವ್ಯಕ್ತಿಗಳಿಗೆ ಪೌರುಷವಿದ್ದಂತೆ ಪಟ್ಟಣಗಳಿಗೂ ಕ್ರಿಯಾಶಕ್ತಿ ಇರುತ್ತದೆ. ಇತಿಹಾಸದ ನಕಾಶವು ಕ್ಷಣಕ್ಷಣಕ್ಕೆ ಬದಲಾಯಿಸುತ್ತಿರುತ್ತದೆ. ಇಂದಿನ ಯುರೋಪಖಂಡದ ನಕಾಶದಂತೆ ಕಾಲವೆಂಬ ಮಹಾಸಮುದ್ರದಲ್ಲಿ ತೆರೆಗಳಂತೆ ಪಟ್ಟಣಗಳು ಬೀಳುತ್ತವೆ, ಏಳುತ್ತವೆ. ಹಾಳಾದ ಸಂಸ್ಕೃತಿಯನ್ನು ಅಭ್ಯಸಿಸಿ ಅದರ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ರೇಖಿಸಿ ತೋರಿಸಲು ಸಾಹಸಪಡುವ ಸಂಶೋಧಕರನ್ನು ಸಮುದ್ರದ ಬುರುಗಿನಲ್ಲಿ ಬೆಣ್ಣೆ ಕಡೆಯಬಹುದಾದ ಗೋಪಿಯರಿಗೆ ಹೋಲಿಸಬಹುದು.

ಇಂದಿನ ಕರ್ನಾಟಕದಲ್ಲಿ ನವೀನ ಸಂಸ್ಕೃತಿಯು ತಲೆದೋರಹತ್ತಿದೆ. ಕೆಲವೊಂದು ಪಟ್ಟಣಗಳಲ್ಲಿ ಈ ಸಂಸ್ಕೃತಿಯು ತನ್ನ ಕೋಟೆಗಳನ್ನು ನಿರ್ಮಿಸಿಕೊಂಡು ನಾಡಿನಲ್ಲೆಲ್ಲ ಹಬ್ಬುತ್ತಿದೆ; ತನ್ನ ವ್ಯಾಜಿನೋ ತಂತ್ರವನ್ನು ಹಬ್ಬಿಸಲು ಪ್ರಯತ್ನಿಸುತ್ತಿದೆ. ಇಂಥ ಕೋಟೆ ಕೊತ್ತಳಗಳಲ್ಲಿ ಧಾರವಾಡ ಒಂದು.

ಕೊಪಣನಗರ, ಪುಲಿಗೆರೆ, ಒಕ್ಕುಂದ, ಕಿಸುವೊಳಲ್ ಮೊದಲಾದ ತಿರುಳುಗನ್ನಡದ ಕೋಟೆಗಳು ಮೆರೆದ ಕಾಲವೇ ಬೇರೆ; ಇಂದಿನ ಕಾಲವೇ ಬೇರೆ. ಆಗ ಧಾರವಾಡವು ಏನಿತ್ತೋ ಮೇಲೆ ಹೇಳಿದ ಸಂಶೋಧಕರಿಗೆ ಗೊತ್ತು. ಇದೊಂದು ಮಾತು ಮಾತ್ರ ನಿಜ; ಧಾರವಾಡವೆಂಬ ನಗರವು ಆಗ ಇನ್ನೂ ಕಾಲ

ಪುರುಷನ ರತ್ನ ಭಾಂಡಾರದಲ್ಲಿ ಗೌಪ್ಯವಾದ ಪುಣ್ಯನಿಧಿಯಾಗಿತ್ತು; ಪುಲಿಗೆರೆಯ ಮಹಾಸೀಮೆಯಲ್ಲಿ ಒಂದು ರೇಖೆಯಾಗಿತ್ತು.

ಕದಂಬರು ಅಳಿಹೋದರು; ರಾಷ್ಟ್ರಕೂಟರು ಬಂದರು; ಚಾಲುಕ್ಯರು ಕಾಲಿಟ್ಟರು ಬನವಸೆ, ಕೊಪಣನಗರ, ಬಾದಾಮಿ ಕಲ್ಯಾಣ ಮೊದಲಾದ ಪಟ್ಟಣಗಳು ರಾಜಧಾನಿಗಳಾಗಿ ಮೆರೆದು ತಲೆಕೆಳಗಾದವು ವಿದ್ಯಾರಣ್ಯರ ವಿಜಯನಗರವು ಹಂಪೆ ಕೊಂಪೆಯಾಯಿತು ಹೀಗೆ ಅನೇಕ ಕ್ರಾಂತಿಯುಗಗಳು ಕಳೆದು ಹೋದರೂ ಧಾರವಾಡವು ಕದಲದಿತ್ತು, 'ಬರುವುದೇನುಂಟೊಮ್ಮೆ ಬರುವ ಕಾಲಕೆ ಬಹುದು' ಎಂದು ಬಯಕೆಯ ಕಣ್ಣನ್ನೆಗೆಯ್ಯುತ್ತ ಕಾಲದ ಮಡಲಲ್ಲಿ ಮಡಗಿತ್ತು

ಮುಂದೆ ಪೇಶ್ವೆಯವರು ಬಂದರು; ಸವಣೂರ ನವಾಬರು ಧಾರವಾಡದಲ್ಲಿ ಮನೆಮಾಡಿದರು. ಕನ್ನಡದ ವಿಶಾಲ ಪ್ರದೇಶದಲ್ಲಿ ಅಜ್ಞಾತ ಅಂಗುಲಿಯಾದ ಧಾರವಾಡವು ಪೇಶ್ವೆಯರ ಸಂಸ್ಕೃತಿಯ ದಕ್ಷಿಣ ಕ್ಷೇತ್ರವಾಯಿತು ತನ್ನ ಕನ್ನಡತೆಯನ್ನು ಗತಪ್ರಾಣವಾಗಿ ಮಾಡಿಕೊಳ್ಳುವ ಹೊತ್ತನ್ನು ತಂದುಕೊಂಡಿತು ಆದರೆ ಕನ್ನಡವು ಮತ್ತೆ ತಲೆಯೆತ್ತಲು ಧಾರವಾಡವೂ ತಲೆಯೆತ್ತಿತು.

ಕನ್ನಡ ಕಾವ್ಯನಾಟಕಗಳಲ್ಲಿ 'ಧಾರಾನಗರ'ವಾಗಿ 'ತಂತುಪುರಿ'ಯಾಗಿ 'ಟುಕುಟುಕು' ಎಂದೇ ಆಗಲಿ ಬದುಕಿಕೊಂಡಿತು. ಇಂದಿಗೆ ಉತ್ತರ ಕರ್ನಾಟಕದಲ್ಲಿ ಧಾರವಾಡವು ಹೊಸ ಸಂಸ್ಕೃತಿಯ ಮೊದಲನೆಯ ಕೋಟೆಯಾಗಿ ನಿಂತಿದೆ !

'ವಿದ್ಯಾವರ್ಧಕ ಸಂಘ'ದ ಪುರಸ್ಕರ್ತರು ಕನ್ನಡದ ಬಾವುಟವನ್ನು ಎತ್ತಿ ನಿಲ್ಲಿಸಿದರು. ರಾಜಕಾರಣ ಪಟುಗಳು ರಾಷ್ಟ್ರೀಯತೆಯ ಮಂತ್ರವನ್ನು ಇಲ್ಲಿಯೇ ಪಠಿಸಿದರು ಸಾಲೆಗಳಾದವು. ಬೇರೆ ಬೇರೆ ಸಂಸ್ಥೆಗಳು ಹುಟ್ಟಿದವು ಶ್ರೀ. ರೊದ್ದರಾಯರ ಹಾಗೂ

ಶ್ರೀ ಅರಟಾಳ ರುದ್ರಗೌಡರ ಸತತ ಪ್ರಯತ್ನದಿಂದ ಧಾರವಾಡವು ಕಾಲೇಜನ್ನು ಕಂಡಿತು ಇದಕ್ಕೂ ಮೊದಲು ಟ್ರೇನಿಂಗ ಕಾಲೇಜಂತೂ ಇತ್ತೇ ಇತ್ತು. ಅನೇಕ ವರುಷಗಳ ವರೆಗೆ ಮದ್ರಾಸಿನ ಜೊತೆಗೆ ಧಾರವಾಡವೇ ರೇಲ್ವೆಯ ತವರೂರಾಗಿತ್ತು

ಜಿಲ್ಹೆಯ ಕೇಂದ್ರವಾದ ಧಾರವಾಡಕ್ಕೆ ಎಲ್ಲ ಕಡೆಯಿಂದ ಜನರು ಬರತೊಡಗಿದರು ಬಂದವರಲ್ಲಿ ರಸಿಕರಾದವರು ನಗರದ ನಿಸರ್ಗ ಸೌಂದರ್ಯಕ್ಕೆ ಮನಸೋತು ಬಿಟ್ಟರು ಕತ್ತಿಕೊಳ್ಳದಲ್ಲಿಯ ಅಗಾಧ ಪ್ರಕೃತಿ ದರ್ಶನ, ಶಾಲ್ಮಲೆಯ ಉಗಮದ ಮೇಲೆ ನಿಂತ ಸೋಮೇಶ್ವರನ ಶೀತಲಾಶ್ರಯ, ಸಪ್ತಾಪುರದ ಮಾರುತಿ, ಸಾಧನಕೇರಿಯ ಹಚ್ಚ ಹಸಿರು, ಕೆಲಗೇರಿಯ ಕೆರೆ-ಹೀಗೆ ದಿಕ್ಕು ದಿಕ್ಕಿಗೆ ಚೆಲುವು ಉಕ್ಕಿ ನಿಂತಾಗ, ಮಲೆನಾಡಿನ ಸೆರಗಿನ ಕಸೂತಿಯೆಲ್ಲ ಇಲ್ಲಿ ಅರಳಿರುವಾಗ, ಧಾರವಾಡವು ವಾಮನನಂತೆ ಬೆಳೆದಿದ್ದರಲ್ಲಿ ಏನಾಶ್ಚರ್ಯ? ಮಾಳಮಡ್ಡಿಯಲ್ಲಿ ಸೊಗಸಿನ ಮನೆಗಳಾದವು. ಬೆಡಗಿನ ಬೀಡಾಯಿತು; ಶ್ರೀಮಂತ ರಡ್ಡಿ ಸಮಾಜದ ಬಂಗಲೆಗಳಾದವು; ಗೋಪಾಳಪುರವಾಯಿತು ಧಾರವಾಡದ ಸುತ್ತಲಿದ್ದ ಗುಡ್ಡ-ದಿನ್ನೆಗಳೆಲ್ಲ ದೀಪಾವಳಿಯ ದಿಬ್ಬಗಳಾದವು ಪಾತಾಳದಷ್ಟು ಆಳವಾದ ಬಾವಿಗಳಿಂದ ಗಿಂಡಿಯಷ್ಟು ನೀರು ಹೊರಡಲೊಲ್ಲದೇಕೆ, ನಗರಸಭೆಯ ದುರ್ಲಕ್ಷ್ಯವು ರಾಶಿ ರಾಶಿಯಾಗಿ ಬಿದ್ದಿರಲೊಲ್ಲದೇಕೆ, ಧಾರವಾಡವನ್ನು ಜನರು ಬಿಡದಾದರು. ಜಿಲ್ಹೆಯಲ್ಲಿಯ ಗೌಡ ದೇಸಾಯಿ ದೇಶಪಾಂಡೆಯರೆಲ್ಲ ಇಲ್ಲಿ ಬಂದು ಮನೆ ಮಾಡಿದರು. ಅಧಿಕಾರದಿಂದ ನಿವೃತ್ತರಾದ ಅಧಿಕಾರಿಗಳು ಇಲ್ಲಿ ತಮ್ಮ ವಿರಾಮ ಗೃಹಗಳನ್ನು ಕಟ್ಟಿದರು ಮುಗುದದ ತಾವರೆ ಕೊಳಗಳಿಗೆ ಗುಂಪು ಗಟ್ಟಿಕೊಂಡು ಹೋಗಿ ಕಮಲಗಳನ್ನು ತರುವ ಸಾಹಸವು ಕಣ್ಣೆದುರಿಗಿರುವಾಗ ಕಿರಿಯರಿಗೆಲ್ಲ ಇಹ ಧಾರವಾಡವು ಸುಖಮಯವಾಗಿ ಪರಿಣಮಿಸದೆ ಏನು ?

ಉತ್ತರ ಕರ್ನಾಟಕದ ಸಾರ್ವಜನಿಕ ಜೀವನದಲ್ಲಿ ಧಾರವಾಡವೆ ಕ್ರಾಂತಿಯನ್ನು ಹೂಡಿತು. ರೊದ್ದರಾಯರು ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರಾಗಿದ್ದಾಗ ಸಂಭವಿಸಿದ ಕೆಲವು ವಿದ್ಯಾ ವಿನೋದಗಳು ಈಗ ಸಕಲರ ಸೊತ್ತಾಗಿವೆ. ಭಾವೀ 'ಕೊಬ್ಬಾಚಾರ್ಯ'ರನ್ನು ಶೋಧಿಸಲು ಒಮ್ಮೆ ಅವರು 'ಉಂಡಿ' ಪರೀಕ್ಷೆಯನ್ನು ಹೂಡಿದರಂತೆ! ಎಲ್ಲರಿಗಿಂತ ಹೆಚ್ಚು ಉಂಡಿಗಳನ್ನು ತಿಂದವರಿಗೆ ಆ ಪರೀಕ್ಷೆಯಲ್ಲಿ ಒಂದನೇ ನಂಬರು! ಆ ಸಮೃದ್ಧಿ ಕಾಲವನ್ನು ನಾವೀಗ ಟೀಕಿಸಬೇಕಾಗಿಲ್ಲ. ನೋಡಿ ಕೌತುಕಪಡಬೇಕಾಗಿದೆ. 'ಕ್ಲಬ್ಬು' ಜೀವನದ ರೂಪು-ರೇಷೆಗಳು ಬೇಕೆ? ಮಿತ್ರಸಮಾಜ ಕಾ: ಸಮಾಃಸ್-ಎಂಬ ವಿಶ್ರಾಮ ಧಾಮಗಳಿವೆ 'ಐತಿಹಾಸಿಕ ಸಂಶೋಧನ'ವಿದೆ 'ವನಿತಾಸಮಾಜ' ವಿದೆ. ಗೋಳೀಬಾರಿನ ಪ್ರಸಂಗವು ಧಾರವಾಡದಲ್ಲಿ ಜರುಗಿದಾಗ ಇಡೀ ಹಿಂದುಸ್ತಾನದ ಕಣ್ಣೀ ಅತ್ತ ಕಡೆಗೆ ತಿರುಗಿದವು. ಅಂದು ಜನತೆಯ ಮನಸ್ಸನ್ನು ಹಿಡಿದ ಮಹನೀಯುರನೇಕರು ಇಂದಿಗೂ ದೇಶ ಸೇವೆಯಲ್ಲಿ ದೇಹವನ್ನು ಸವೆಸುತ್ತಿದ್ದಾರೆ. ಕನ್ನಡ-ಮರಾಠಿ ವಾದವು ಹುಟ್ಟಿ ಹಿಮ್ಮೆಟ್ಟಿದ್ದು ಧಾರವಾಡದಲ್ಲಿ. ಎಡ್‌ವರ್ಡ ಪಾರ್ಕಿನಲ್ಲಿ, ಧಾರವಾಡ ಬಾರ್ ರೂಮಿನಲ್ಲಿ ಕುಳಿತೇ ಕಡಪಾರಾಯರು ಏಕೀಕರಣ ಮಂತ್ರವನ್ನು ಜಪಿಸಿದರು. ಇಂದಿನ ಕನ್ನಡ ಕಾವ್ಯವು ಈ ಕಡೆಗೆ ಮೊದಲು ಮೊಳಗಿದ್ದು ಕರ್ನಾಟಕ ಕಾಲೇಜಿನಲ್ಲಿ; ನಾಡಹಬ್ಬದ ಉತ್ಸವ ಪ್ರಸಂಗದಲ್ಲಿ 'ಗುಂಪಿ'ನ ಸಾಹಿತ್ಯ ನಿರ್ಮಾಣಕ್ಕೆ ಧಾರವಾಡವೇ ಕೇಂದ್ರವಾಯಿತು. ಶಾಂತಕವಿಗಳು 'ರಕ್ಷಿಸು ಕರ್ನಾಟಕ ದೇವಿ' ಎಂದು ಹಾಡಿ ಹರಿಸಿದ್ದು ಧಾರವಾಡದ ಬೀದಿಗಳಲ್ಲಿ ಕಾಶಿವ್ಯಾನಂದರು ತಿತಮ್ಮ ಕಟ್ಟಕಡೆಯ ವಿನೋದಗಳಿಂದ ಜನರನ್ನು ಸಂತೋಷಪಡಿಸಿದ್ದು ಧಾರವಾಡದಲ್ಲಿಯ ತಮ್ಮ ಮನೆಯಲ್ಲಿ. ಅಖಿಲ ಕರ್ನಾಟಕದ ನಾಟಕ ಪರಿಷತ್ತನ್ನು ದಿವಂಗತ ಶ್ರೀ ಸಾಸನೂರವರು ಇಲ್ಲಿಯೇ ಸೇರಿಸಿ ಮೊದಲನೆಯ ಅಧಿವೇಶನ

ವನ್ನು ನೆರವೇರಿಸಿದರು ಆ ಮೇಲೆ ಧಾರವಾಡವು ಶ್ರೀರಂಗರ ನಾಟಕಗಳ ರಂಗಸ್ಥಲವಾಯಿತು ಈಗ ಕರ್ನಾಟಕದ ಸಂಸ್ಕೃತಿ ಸಂಶೋಧನ ಸಂಸ್ಥೆಯು ಇಲ್ಲಿಯೇ ತಳವೂರಿದೆ ಒಂದಲ್ಲ, ಎರಡಲ್ಲ ಅನೇಕ ಕಾರ್ಯಗಳನ್ನು ಸಫಲವಾಗಿಸಿ ಉತ್ತರ ಕರ್ನಾಟಕದ ಕೀರ್ತಿಮುಖವಾಗಿ ಧಾರವಾಡವು ಮೆರೆಯುತ್ತಲಿದೆ

ಇತ್ತೀಚೆಗೆ ಧಾರವಾಡದ ಭವಿತವ್ಯತೆಯನ್ನು ಕುರಿತು ಅನೇಕ ಅಪಸ್ವರಗಳು ಕೇಳಬರುತ್ತಿವೆ. ಇದರಲ್ಲಿ ಸತ್ಯಾಂಶವೂ ಇದೆ. ಧಾರವಾಡದಲ್ಲಿ ಸಾರ್ವಜನಿಕ ಜೀವನವು ಅಷ್ಟೊಂದಾಗಿ ಬೆಳೆದಿಲ್ಲವಂತೆ ! ಪರಸ್ಪರ ನಂಬುಗೆಯಿಲ್ಲದ ಇಲ್ಲಿಯ ಸಂಶಯಮಯ ವಾತಾವರಣದಲ್ಲಿ ಸಂಸ್ಥೆಗಳು ಬೆಳೆಯಲು ಅವಕಾಶವಿಲ್ಲವಂತೆ ! ವರ್ಷಕ್ಕೊಂದು ಶಾಲೆ ಹುಟ್ಟಿ ಸಾಯುತ್ತದೆ ಪತ್ರಿಕಾ ವಾಙ್ಮಯದ ಜನನ-ಮರಣದ ಲೆಕ್ಕವು ಚಿತ್ರಗುಪ್ತರನ್ನು ದಿಗಿಲುಗೊಳಿಸಬಹುದು ವಿಕ್ಟೋರಿಯಾ ಕಾಲೇಜು ಮುರಿದು ಕರ್ನಾಟಕಕ್ಕೆ ಅಪಾರವಾದ ನಷ್ಟವೊದಗಿತು. ಧಾರವಾಡದ ನಾಗರಿಕರು ಅದನ್ನು ಉಳಿಸಿಕೊಳ್ಳಲಿಲ್ಲವೇಕೆ ? ರ್‍ಯಾಂಗಲರ ಕಟ್ಟೆಯವರು ಮನೆ ಮನೆ ತಿರುಗಿದಾಗ ಅವರಿಗೆ ಹಣಕಾಸು ಹೊರಡಬಾರದೆಂದರೇನು? ಅಸೂಯೆ, ಅಪನಂಬಿಕೆ, ದ್ವೇಷ, ದೂಷಣೆ, ಬೆಲ್ಟಿನ ಕೆಳಗೆ ಹೊಡೆದಾಡುವಿಕೆ, ಬೆಲ್ಟಿನ ಮೇಲೆ ಉಗುಳುವಿಕೆ—ಇವುಗಳಿಂದ ಧಾರವಾಡದ ಜೀವನ ಸಮುದ್ರದಲ್ಲಿ ವಿಷವೆದ್ದಿದೆಯಂತೆ ! ಇಂಥ ಪಟ್ಟಣವು ಮುಂಬೈ ಕರ್ನಾಟಕದ ರಾಜಧಾನಿಯಾಗುವದು ಹೇಗೆ ? ಧಾರವಾಡದ ದೈವವೇನಿರುವದೋ ನಾವಿನ್ನೂ ಕಾಣೆವು.

ಧಾರವಾಡದಲ್ಲಿ ಪೌರುಷವಿದೆಯೆಂಬುದನ್ನು ಯಾರೂ ಅಲ್ಲಗಳೆಯಲಾರರು ಧಾರವಾಡವು ಹುಬ್ಬಳ್ಳಿಯ ರಸ್ತೆಯಗುಂಟ ಹಬ್ಬಬೇಕು, ಎರಡೂ ನಗರಗಳು ಕೂಡಿ ಒಂದು ಮಹಾನಗರವಾಗಬೇಕು, ಹೀಗೆ ಧಾರವಾಡ-ಹುಬ್ಬಳ್ಳಿ ನಗರವು ಉತ್ತರ ಕರ್ನಾಟಕದ ಬಳ್ಳಿಗೆ ಬಿಟ್ಟ ಹೂವಾಗಬೇಕು. ಉತ್ತರದ ಬೆಂಗಳೂರಾಗ

ಹೇಕು. ಹುಬ್ಬಳ್ಳಿಯ ಭಾಗವು ಉದ್ಯೋಗದ ಕೇಂದ್ರ. ಧಾರವಾಡ ಭಾಗವು ಸಂಸ್ಕೃತಿಯ ಕೇಂದ್ರ. ಇಂಥ ಎರಡು ಭಾಗಗಳನ್ನೊಳಗೊಂಡ ಮಹಾನಗರವು ಮುಂಬಯಿ ಕರ್ನಾಟಕದ ಮುಖ್ಯ ಪಟ್ಟಣವಾಗಬೇಕು. ಇದೊಂದು ನಾವು ಕಾಣುತ್ತಿರುವ ಕನಸು. ಇದೇನು ಮನಸ್ಸಿನ ಮಂಡಿಗೆಯೋ, ಕಾಳನುಹಿಡಿದ ದಂಡಿಗೆಯೋ, ದೈವವು ಹಿಂಜಿಟ್ಟ ಅರಳೆಯ ಅಂಡಿಗೆಯೋ ಏನನ್ನೂ ಹೇಳಲು ಬರುವದಿಲ್ಲ. ಇದೊಂದು ಕನಕನ ಮುಂಡಿಗೆಯೆಂದು ಮಾತ್ರ ನಾವು ಸಮಾರೋಪಣೆ ಮಾಡಬಹುದು ಆಗುಹೋಗುಗಳ ಮೇಲೆ ನಮ್ಮ ಆಧಿಪತ್ಯವಿಲ್ಲ; ಆದರೆ ಧಾರವಾಡವನ್ನು ಮರೆಯುವದೆಂತು? ಕೋಟಿ ಯೋಜನೆಗಳನ್ನು ದೂರ ದಾಟಿ ಹೋದರೂ ಕ್ಯಾರಕೊಪ್ಪದಿಂದ ಧಾರವಾಡದ ನಿಲ್ಮನೆಗೆ ಗಾಡಿಯೋಡುವಾಗ ಕಂಗೊಳಿಸುವ ಕಾಲೇಜು ನಿರಂತರವಾಗಿ ಕಣ್ಣುಕಟ್ಟುವದು. ಸಾಧನಕೇರಿಯ ಹಚ್ಚಹಸಿರೂ ಪಾತರಗಿತ್ತಿ ಪಕ್ಕದಲ್ಲಿ ಅಂಬಿಕಾತನಯದತ್ತರು ವರ್ಣಿಸಿದ ನೂರೆಂಟು ಹೂಗಳೂ ಒಂದೇ ಸವನೆ ಕುಣಿದು ಕರೆಯುವವು. ಶಾಲ್ಮಲೆಯ ಸೋಮೇಶ್ವರನು ಸನ್ನಿಧಾನದ ಸೌಂದರ್ಯವನ್ನು ತೋರಿಸಿ ಆಶೆ ಹಚ್ಚುವನು. ಸಪ್ತಾಪುರದ ರಾಜಮಾರ್ಗಗಳು ಸಪ್ತಸಮುದ್ರಗಳಾಚೆ ಗೋಚರವಾಗುವವು. ಮುಂಬೈ ಕರ್ನಾಟಕವು ಧಾರವಾಡದ ಯೋಗ್ಯತೆಯನ್ನರಿತು ತಕ್ಕಂತೆ ಮರ್ಯಾದಿಸುವದೋ ಇಲ್ಲೋ ನಾನು ಹೇಳಲಾರೆ. ಆದರೆ ನನ್ನ ದೃಷ್ಟಿಯಲ್ಲಿ ಧಾರವಾಡವು ಮೀಸಲಿಟ್ಟನಾಡು; ಸಕಲ ಸೌಭಾಗ್ಯದ ಬೀಡು ಮಾರ್ಸೈ ಬಂದರ ನಗರವು ಫ್ರಾನ್ಸ ದೇಶದ ದಕ್ಷಿಣದ ರಾಜಧಾನಿಯಾಯಿತು. ಅಂದಿನಿಂದ ಪ್ಯಾರಿಸ ನಿವಾಸಿಗಳಿಗೂ ಮಾರ್ಸೈದವರಿಗೂ ಒಂದು ಬಗೆಯ ಈರ್ಷೆಬಿದ್ದ ಹಾಗಾಗಿದೆ. ಪ್ಯಾರಿಸ್‌ದಿಂದ ಬಂದ ಪ್ರೇಕ್ಷಕನು ಮಾರ್ಸೈ ಪಟ್ಟಣವನ್ನು ಗೀಳು ಮಾಡಿ ಮಾತನಾಡಿದರೆ ಮಾರ್ಸೇ ನಿವಾಸಿಯು ಸಿಟ್ಟು ಬೆಂಕಿಯಾಗುತ್ತಾನೆ. ಮಾರ್ಸೈದಲ್ಲಿ ಲಾಕಾರ್ನಿಚ ಎಂಬ ಪ್ರಸಿದ್ಧ ರಾಜ

ಮಾರ್ಗವಿದೆ. ಎಡಬದಿಗೆ ನೀಳವಾಗಿ ಬೆಳೆದ ಮರಗಳ ಕೋಶಿನಿಂದ ಅದು ಶೋಭಿಸುತ್ತದೆ. ಲಾಕಾರ್ನೀಚ ಮಾರ್ಗದ ಪಟ್ಟ ನಡುವೆ ನಿಂತು ಪ್ಯಾರಿಸ ಪಟ್ಟಣದಿಂದ ಬಂದ ಪ್ರೇಕ್ಷಕನೊಬ್ಬನು ಸಮೀಪದಲ್ಲಿ ನಿಂತ ಪೋಲೀಸನನ್ನು ಕುರಿತು ಬುದ್ಧಿಪೂರ್ವಕವಾಗಿ ಲಾಕಾರ್ನೀಚ ಎಂದು ಲೋಕಪ್ರಸಿದ್ಧವಾದ ರಾಜಬೀದಿಯು ಎಲ್ಲಿದೆ ಎಂದು ಕೇಳಿದನಂತೆ. ಆಗ ರೇಗಿಗೆದ್ದ ಪೋಲೀಸನು ತನ್ನೆದುರಿಗೇ ರಸ್ತೆಯ ಮೇಲೆ ಉಗುಳಿ, 'ಇಲ್ಲ' ಎಂದು ಉತ್ತರ ಕೊಟ್ಟನಂತೆ !

ಧಾರವಾಡದ ದೈವ ಏನೇ ಇರಲಿ, ಪಾಮರರಿಂದ ಪಂಡಿತರ ವರೆಗೆ, ಬಿಕ್ಕೆ ಬೇಡುವವರಿಂದ ಚೊಕ್ಕಾಗಿ ಕಲಿತು ಹರಟೆ ಕೊಚ್ಚುವವರ ವರೆಗೆ, ಅದು ಪ್ರಾಣಪದಕವೆನ್ನಿಸಿಕೊಂಡಿದೆ; ಜೀವನದ ಹಿರಿ ಹೆಮ್ಮೆಯಾಗಿದೆ.

— ಶ್ರಾಂತಿಪ್ರಿಯ



# ಪರಿಚಯ

ಈ ಪ್ರಬಂಧವನ್ನು ಬರೆದವರು (ಕ್ರಾಂತಿಪ್ರಿಯ) **ಪ್ರಿ. ವಿನಾಯಕ ಕೃಷ್ಣ ಗೋಕಾಕರು.** ಇವರು ಈಗ ಧಾರವಾಡದ ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾರೆ. ಇವರ ಮಾಧ್ಯಮಿಕ ಅಭ್ಯಾಸವು ಸವಣೂರ ಮಸ್‌ಜಿದ್ ಹಾಯಸ್ಕೂಲಿನಲ್ಲಿ ಆಯಿತು ಕಾಲೇಜ ಅಭ್ಯಾಸವು ಧಾರವಾಡ ಕರ್ನಾಟಕ ಕಾಲೇಜದಲ್ಲಿ ಆಯಿತು, ಬಿ ಎ ಮತ್ತು ಎಂ. ಎ, ಪರೀಕ್ಷೆಗಳಲ್ಲಿ ಇಂಗ್ಲೀಷನ್ನು ಮುಖ್ಯವಿಷಯವಾಗಿಟ್ಟುಕೊಂಡು ಮೊದಲನೆಯ ಶ್ರೇಣಿಯಲ್ಲಿ ಪಾಸಾದರು.

ಇವರು 'ಪಯಣ' 'ಸಮುದ್ರ ಗೀತೆಗಳು' ಮುಂತಾದ ಕಾವ್ಯ ಸಂಗ್ರಹಗಳನ್ನೂ, 'ಇಜ್ಜೋಡು' ಎಂಬ ಕಾದಂಬರಿಯನ್ನೂ 'ಜನ ನಾಯಕ' ವೆಂಬ ನಾಟಕವನ್ನೂ ಪ್ರಕಟಿಸಿದ್ದಾರೆ. ವಿಮರ್ಶಾ ಕ್ಷೇತ್ರದಲ್ಲಿ ಇವರ ಪ್ರಸಿದ್ಧಿ ಹೆಚ್ಚು ಕನ್ನಡದಲ್ಲಿ ವಿಮರ್ಶೆಗೆ ಒಂದು ಗತಿಯನ್ನು ಕೊಟ್ಟ ಶ್ರೇಯಸ್ಸು ಇವರದಾಗಿದೆ

ಈ ಪ್ರಬಂಧವನ್ನು ಇವರ **'ಇಂದಿನ ಕರ್ನಾಟಕ'** ಎಂಬ ಹೊತ್ತಿಗೆಯಿಂದ ಆಯ್ದುಕೊಂಡಿದೆ.

**ಟಿಪ್ಪಣಿ:—**

ಮ್ಯಾಜಿನೋತಂತ್ರ— ಫ್ರಾನ್ಸದೇಶದವರು ಜರ್ಮನರಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಅಭೇದ್ಯವೆಂದೆನಿಸಿದ ಕೋಟೆಯೊಂದನ್ನು ಕಟ್ಟಿದ್ದರು. ಆದರ ಹೆಸರು ಮ್ಯಾಜಿನೋಲಾಯಿನ್ ಎಂದಿದೆ. ಮ್ಯಾಜಿನೋತಂತ್ರ- ಈ ಶಬ್ದವು ಮ್ಯಾಜಿನೋಲಾಯಿನ್‌ದಿಂದ ಬಂದಿದೆ-ಆದರ ಅರ್ಥವು 'ಭದ್ರತೆ' ಎಂದಾಗುವುದು.

'ಗುಂಪು'— ಧಾರವಾಡದಲ್ಲಿದ್ದ ಗೆಳೆಯರ ಗುಂಪು ಶ್ರೀ ಬೇಂದ್ರೆಯವರು ಇದರ ಮುಖ್ಯ ಪ್ರೇರಕರು.

ದಂಡಿಗೆ; ತಕ್ಕಡಿ.
ಕನಕನ ಮುಂಡಿಗೆ; ಬಿಡಿಸಲು ಕಠಿಣವಾದ ಒಗಟು.
ಶಾಲ್ಮಲೆ; ಧಾರವಾಡದ ಸಮೀಪದಲ್ಲಿರುವ ಒಂದು ನದಿಯ ಉಗಮದ ಹೆಸರು. ಇಗ ನಂತ ಎಲ್ಲಿಯೂ ಹರಿದಿಲ್ಲ
ಕೊಪಣ ನಗರ; ಕೊಪ್ಪಳ.
ಪುಲಿಗೆರೆ; ಈಗಿನ ಲಕ್ಷ್ಮೇಶ್ವರ.
ಕಿಸುವೊಳಲ್; ಪಟ್ಟದಕಲ್ಲು.

**ಅಭ್ಯಾಸಃ—**

## ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿಃ—

(೧) ಈಗಿನ ಧಾರವಾಡವು ಮೊದಲು ಯಾವ ಸ್ಥಿತಿಯಲ್ಲಿದ್ದಿರಬಹುದೆಂದು ಲೇಖಕರು ಊಹಿಸಿದ್ದಾರೆ ?
(೨) ಧಾರವಾಡವು ಬೆಳೆದ ಬಗೆ ಹೇಗೆ ?
(೩) "ಉತ್ತರ ಕರ್ನಾಟಕದ ಸಾರ್ವಜನಿಕ ಜೀವನದಲ್ಲಿ ಧಾರವಾಡವೆ ಕ್ರಾಂತಿಯನ್ನು ಹೂಡಿತು" ಎಂಬ ವಿಧಾನವನ್ನು ಸಮರ್ಥಿಸಿರಿ.
(೪) ಅನೇಕ ರೀತಿಯಲ್ಲಿ ಮುನ್ನಡೆಯಿಟ್ಟ ಧಾರವಾಡದಲ್ಲಿ ಯಾವ ಕುಂದು ಕೊರತೆಗಳನ್ನು ಕಾಣಬಹುದು ?
(೫) ಧಾರವಾಡದ ಭವಿಷ್ಯತ್ತಿನ ಬಗ್ಗೆ ಲೇಖಕರ ವಿಚಾರವೇನಿದೆ ?
(೬) ಈ ಪಾಠದಲ್ಲಿಯ ಸೂಕ್ಷ್ಮ ವಿನೋದದ ಉದಾಹರಣೆಗಳನ್ನು ಆಯ್ದು ತೆಗೆಯಿರಿ.
(೭) ಪರಿಚಯ ಕೊಡಿರಿ: ಶ್ರೀ. ರೊದ್ದರಾಯರು, ಆಲೂರ ರುದ್ರಗೌಡರು, ವಿದ್ಯಾವರ್ಧಕ ಸಂಘ.

**ಸ್ಪಷ್ಟೀಕರಿಸಿರಿ—**

(ಅ) ಕರ್ನಾಟಕದಲ್ಲಿ ಧಾರವಾಡವು ಹೊಸ ಸಂಸ್ಕೃತಿಯ ಮೊದಲನೆಯ ಕೋಟೆಯಾಗಿ ನಿಂತಿದೆ.

(ಆ) ಧಾರವಾಡವು ಜೀವನದ ಹಿರಿ ಹೆಮ್ಮೆಯಾಗಿದೆ.

## ಕೆಳಗೆ ಕೊಟ್ಟವುಗಳನ್ನು ನಿಮ್ಮ ವಾಕ್ಯದಲ್ಲಿ ಉಪಯೋಗಿಸಿರಿ

ಬೆಡಗಿನ ಬೀಡು, ಮನಸೋಲು, ಚೆಲುವು ಉಕ್ಕಿಸಿಲ್ಲು, ಹಾಡಿಹರಸು.

**ಕೆಳಗಿನ ವಾಕ್ಯದಲ್ಲಿ ತೆರವಿಟ್ಟ ಸ್ಥಳಗಳಲ್ಲಿ ತಕ್ಕ ಶಬ್ದಗಳನ್ನು ಹಾಕಿ ವಾಕ್ಯಗಳನ್ನು ಪೂರ್ಣಮಾಡಿ ಬರೆಯಿರಿ:—**

ಶಬ್ದಗಳಿಂದ ಹೃದಯದ ಭಾವಗಳನ್ನು ನಿರೂಪಿಸಬಲ್ಲವನಿಗೆ.. .. ....' ವರ್ಣರೇಖಾ ವಿನ್ಯಾಸಗಳಿಂದ ಭಾವಗಳನ್ನು ಹುಟ್ಟಿಸಬಲ್ಲವನಿಗೆ.........' ಕಲ್ಲು—ಕಟ್ಟಿಗೆ—ಮಯಣಗಳಲ್ಲಿ ಕಲ್ಪನೆಯ ಸೃಷ್ಟಿಯನ್ನು ನಿರ್ಮಿಸಬಲ್ಲವನಿಗೆ.. ......" ಸ್ವರಗಳ ಮೇಳದಿಂದ ಎದೆಯನ್ನು ಕರಗಿಸಬಲ್ಲವನಿಗೆ... .....' ಹಸ್ತ ಪಾದಗಳ ವಿನ್ಯಾಸದಿಂದ ಭಾವಗಳನ್ನು ರೂಪಿಸಬಲ್ಲವನಿಗೆ.. ..' ಎಂದೂ ಅನ್ನುವರು.

**ವ್ಯಾಕರಣ:—**

**ಕೆಳಗಿನ ಅವತರಣದಲ್ಲಿ ವಿರಾಮಚಿಹ್ನಗಳನ್ನು ಸೇರಿಸಿರಿ:-**

(ಅ) ಧಾರವಾಡ ನಾಗರಿಕರು ಅದನ್ನು ಉಳಿಸಿಕೊಳ್ಳಲಿಲ್ಲವೇಕೆ ರ್‍ಯಾಂಗುಲರ ಕಟ್ಟಿಯವರು ಮನೆ ಮನೆ ತಿರುಗಿದಾಗ ಅವರಿಗೆ ಹಣಕಾಸು ಹೊರಡಬಾರದೆಂದರೇನು ಅಸೂಯೆ ಅಪನಂಬಿಕೆ ದ್ವೇಷ ದೂಷಣೆ ಬೆನ್ನಿನ ಕೆಳಗೆ ಹೊಡೆದಾಡುವಿಕೆ ಬೆನ್ನಿನ ಮೇಲೆ ಉಗುಳುವಿಕೆ ಇವುಗಳಿಂದ ಧಾರವಾಡ ಜೀವನ ಸಮುದ್ರದಲ್ಲಿ ವಿಷವೆದ್ದಿದೆಯಂತೆ.



# ೧೧. ಶ್ರಮಜೀವಿ ಮೇನ್ಯಳು

೧೮೯೬ ನೇ ಜನವರಿ ಮೊದಲದಿನ ಹದಿನೆಂಟು ವರ್ಷದ ಮೇನ್ಯಳು ಮುದುಕ ತಂದೆಯನ್ನು ಹಿಂದೆಬಿಟ್ಟು, ಕೊರೆಯುವ ಚಳಿಯಲ್ಲಿ ತನ್ನ ಕೆಲಸಕ್ಕೋಸ್ಕರ ಹೊರಟಳು. ದೃಢಮನಸ್ಸಿನಿಂದ ತಂದೆಯನ್ನು ಬೀಳ್ಕೊಂಡು ರೈಲುಗಾಡಿ ಏರಿದಳು ಒತ್ತಿ ಬರುತ್ತಿದ್ದ ಅಳುವನ್ನು ತಡೆದುಕೊಂಡು ತಂದೆಯನ್ನು ನೋಡಿ ಮೃದುವಾಗಿ ನಕ್ಕಳು. ಗಾಡಿ ಹೊರಟು ತಂದೆಯ ಆಕೃತಿ ಮರೆಯಾದ ಕೂಡಲೆ, ಮೇನ್ಯಳಿಗೆ ದುಃಖ ನಿರಾಶೆಗಳು ಹೃದಯವನ್ನೆಲ್ಲ ತುಂಬಿದವು. ಹುಚ್ಚು ಹುಚ್ಚು ಭಾವನೆಗಳೆಲ್ಲ ಅವಳನ್ನು ಹೆದರಿಸಿ ನಡುಗಿಸಿದವು. ಈಗ ಸಿಕ್ಕಿರುವ ಹೊಸಮನೆಯೂ ಹಿಂದಿನ ಮನೆಗಳಂತೆ ಆದರೆ? ತಾನು ಇಲ್ಲದಾಗ ತಂದೆ ಖಾಯಿಲೆ ಬಿದ್ದರೆ? ತಿರುಗಿ ತನ್ನ ಮುದುಕ ತಂದೆಯನ್ನು ನೋಡುವುದಕ್ಕೇ ಆಗದೆ ಹೋದರೆ? ಅಳು ಉಕ್ಕಿ ಉಕ್ಕಿ ಬಂತು ಕಣ್ಣೊರಸಿಕೊಂಡಷ್ಟೂ ಒತ್ತಿ ಒತ್ತಿ ಬರುತ್ತಿತ್ತು.

ಪ್ರಯಾಣದ ಆಯಾಸದಿಂದಲೂ, ಮನಸ್ಸಿನ ಉದ್ವೇಗದಿಂದಲೂ ಜರ್ಝರಿತಳಾಗಿ ಮೇನ್ಯ ಹಳ್ಳಿಯ ಮನೆಯನ್ನು ತಲುಪಿದಳು.

ಮನೆಯ ಯಜಮಾನ ಯಜಮಾನಿಯರು ತುಂಬ ಶ್ರೀಮಂತರಲ್ಲದಿದ್ದರೂ ಒಳ್ಳೆಯ ಜನ. ಮನೆಯಲ್ಲಿ ಮಕ್ಕಳ ಒಂದು ತಂಡವೇ ಇತ್ತು. ಮೂರು ಹಿರಿಯ ಗಂಡು ಮಕ್ಕಳು ಹೊರಗೆ ಓದುತ್ತಿ

ದ್ದರು. ಹಿರಿಯ ಹುಡುಗಿ ಬ್ರೊಂಕ ಮೇನ್ಯಳ ಜೆತೆಯ ವಯ ಸ್ಸಿನವಳು ಅವರಿಬ್ಬರಲ್ಲಿಯೂ ಸ್ನೇಹ ಬೆಳೆದು ಬಂದಿತು

ಒಂದು ದಿನ ಬೀದಿಯಲ್ಲಿ ಕೊಳಕಾದ ರೈತರ ಹುಡುಗರ ಒಂದು ತಂಡವನ್ನು ನೋಡಿದಾಗ, ಮೇನ್ಯಳಿಗೆ ಒಂದು ಯೋಚನೆ ಹೊಳೆಯಿತು. ತಮ್ಮ ಸ್ವಂತ ಭಾಷೆಯನ್ನು ಓದಲು, ಬರೆಯಲು ತಿಳಿಯದ ಈ ಪೋಲಿಷ್ ಹುಡುಗರಿಗೆ ಓದು ಕಲಿ ಸೋಣವೆಂದು ಅವಳು ಬ್ರೊಂಕಳೊಡನೆ ಪ್ರಸ್ತಾಪಿಸಿದಳು. ಇದು ಸರ್ಕಾರಕ್ಕೆ ತಿಳಿದರೆ ಸೈಬೀರಿಯಾದ ಮಂಜನ್ನು ಕಾಣಬೇಕಾ ದೀತೆಂದು ತಿಳಿದಿದ್ದರೂ ಬ್ರೊಂಕ ಇದಕ್ಕೆ ಒಪ್ಪಿಕೊಂಡಳು ಇವರಿಬ್ಬರೂ ಸೇರಿ ಹತ್ತು ಹದಿನೈದು ಹುಡುಗರಿಗೆ ಪೋಲಿಷ್ ಭಾಷೆಯನ್ನು ಓದಲು ಕಲಿಸಿಕೊಟ್ಟರು.

ದಿನ ಕಳೆಯುತ್ತ ಹೋದಂತೆ ಮೇನ್ಯಳ ಹೃದಯದ ಕಳ ವಳ ಹೆಚ್ಚುತ್ತ ಬಂದಿತು. ತಾನು ಇಲ್ಲಿ ಗವರ್ನೆಸ್ ಆಗಿ ದುಡಿ ಯುತ್ತಿರುವ ಸಮಯದಲ್ಲಿಯೇ ಸಾವಿರಾರು ವಿದ್ಯಾರ್ಥಿಗಳು ವಿಶ್ವ ವಿದ್ಯಾಲಯದಲ್ಲಿ ಸೇರಿ ಓದುತ್ತಿರುವರಲ್ಲವೆ? ಪ್ರಯೋಗ ಶಾಲೆ ಗಳಲ್ಲಿ ಕೆಲಸ ಮಾಡುತ್ತಿರುವರಲ್ಲವೆ? ಗಣಿತ, ಭೌತಶಾಸ್ತ್ರ, ರಸಾಯನ-ಶಾಸ್ತ್ರ ಇವುಗಳಲ್ಲಿ ಪ್ರೌಢವಾದ ಭಾಷಣಗಳನ್ನು ಕೇಳು ತ್ತಿರುವ ಅವರ ಭಾಗ್ಯ ಎಷ್ಟಿರಬಹುದು? ಪ್ಯಾರಿಸ್‌ಗೆ ಹೋಗಿ ಓದಬೇಕೆಂಬುದು ತನ್ನ ಮನಸ್ಸನ್ನು ಎಡಬಿಡದೆ ಕೊರೆಯುತ್ತಿದ್ದ ಆಸೆ. ಈ ಹಳ್ಳಿಯ ವಾಸ, ಈ ದುಡಿತ, ಬಾಳಿನ ನೀರಸವಾದ ಈ ವ್ಯವಹಾರ, ಇವೆಲ್ಲವುಗಳಿಂದ ಒಂದೇ ಸಲ ತಪ್ಪಿಸಿಕೊಂಡು, ತನ್ನ ಮನಸ್ಸನ್ನು ಸೆಳೆದು ಮೋಹಿಸುತ್ತಿದ್ದ ವಿಶ್ವವಿದ್ಯಾಲಯ ವನ್ನು ತನ್ನ ಬಾಳಿನಲ್ಲಿ ಎಂದಾದರೂ ಒಂದು ದಿನ ಕಾಣುವುದು ಸಾಧ್ಯವೇ? ಈ ಚಿಂತೆಗಳೆಲ್ಲ ಮೇನ್ಯಳ ಮನಸ್ಸನ್ನು ಕೊರೆಯು ತ್ತಿದ್ದಂತೆಯೇ, ತನ್ನ ಬಾಳಿನ ದುಃಖ ಪೂರಿತವಾದ ಪರಿಸ್ಥಿತಿ ಅವಳಿಗೆ ಸ್ಪಷ್ಟವಾಗಿ ಹೊಳೆದು ತೋರುತ್ತಿತ್ತು. ವಾರ್ಸಾದಲ್ಲಿ

ಮುದುಕ ತಂದೆ ತನಗಾಗಿ ಕಾಯುತ್ತಿದ್ದಾನೆ. ಪ್ಯಾರಿಸ್‌ದಲ್ಲಿ ಬ್ರೋನ್ಯ ಬಡತನದಿಂದ ತೊಳಲುತ್ತಿದ್ದಾಳೆ. ಅವಳಿನ್ನೂ ವರ್ಷಾನು ಗಟ್ಟಲೆ ಓದಬೇಕು ತಾನು ದುಡಿದು ಹಣ ರಾಶಿ ಹಾಕುತ್ತೇನೆಂಬ ತನ್ನ ಭಾವನೆಯನ್ನು ನೆನಸಿಕೊಂಡರೆ ಅವಳಿಗೇ ನಗು ಬರುತ್ತಿತ್ತು. ಇಂತಹ ಸಮಯದಲ್ಲಿ ಹಳ್ಳಿಯಿಂದ ತಪ್ಪಿಸಿಕೊಂಡು ಹೋಗುವುದು ಎಂದಿಗಾದರೂ ಸಾಧ್ಯವೇ? ಗವರ್ನೆಸ್ ಆಗಿ ಹೊಟ್ಟೆ ಹೊರೆಯುವದಕ್ಕಿಂತ ಹೆಚ್ಚಾಗಿ ತನ್ನ ಬಾಳಿನಲ್ಲಿ ಇನ್ನೇನೂ ಸಾಧಿಸುವದಕ್ಕೆ ಸಾಧ್ಯವಿರಲಿಲ್ಲ. ಇಂತಹ ಚಿಂತೆಗಳು ಕಾಡುತ್ತಿದ್ದಾಗ ಮೇನ್ಯ ದುಃಖದಿಂದ ಕುಸಿದು ಹೋಗುತ್ತಿದ್ದಳು.

ಮೇನ್ಯ ಸಂಪಾದಿಸುವ ಹಣಕ್ಕೋಸ್ಕರ ಬಿಡುವಿಲ್ಲದೆ ದುಡಿಯಬೇಕಾಗುತ್ತಿತ್ತು. ಬೆಳಿಗ್ಗೆ ೮ ರಿಂದ ೧೧ ಘಂಟೆಯ ವರೆಗೆ, ಮಧ್ಯಾನ್ಹ ೨ ರಿಂದ ೭ ಘಂಟೆಯ ವರೆಗೆ ಅವಿಚ್ಛಿನ್ನವಾಗಿ ಕೆಲಸ ಇರುತ್ತಿತ್ತು. ಹುಡುಗರಿಗೆ ಪಾಠ ಹೇಳಿಕೊಡುವುದಂತೂ ಮೈ ಪರಚಿ ಕೊಳ್ಳುವಂತಹ ಕೆಲಸ ಮೇನ್ಯ ಅಣ್ಣನಿಗೆ ಬರೆದ ಕಾಗದದಲ್ಲಿ ಅದರ ವಿಷಯವಾಗಿ ಹೀಗೆ ಬರೆದಿದ್ದಳು - 'ಅವರಿಗೆ ಪಾಠ ಹೇಳುವದೆಂದರೆ ಮರಳಿನಲ್ಲಿ ಮನೆ ಕಟ್ಟಿದ ಹಾಗೆ. ಒಂದು ವಿಷಯ ಕಲಿಯುವ ಹೊತ್ತಿಗೆ ಹಿಂದಿನ ದಿನದ ಪಾಠ ಅವರು ಪೂರ್ತಿಯಾಗಿ ಮರೆತು ಬಿಟ್ಟಿರುತ್ತಾರೆ ಕೆಲವು ಸಲ ಇದು ನನಗೆ ಅಸಾಧ್ಯ ವೇದನೆಯನ್ನುಂಟುಮಾಡುತ್ತದೆ.

ಇಷ್ಟೆಲ್ಲ ನೋವು ಮೇನ್ಯಳ ಮನಸ್ಸನ್ನು ಹಿಂಡುತ್ತಿರುವಾಗಲೇ ಅವಳ ಹೃದಯಕ್ಕೆ ಬರೆ ಕೊಡುವ ಇನ್ನೊಂದು ಘಟನೆಯೂ ನಡೆಯಿತು ಮನೆಯ ಹಿರಿಯ ಮಗ ಕ್ಯಾಸಿಮಿರ್ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದವನು ಮನೆಗೆ ಬಂದ. ಮನೆಯಲ್ಲಿ ಸುಂದರವಾದ ಅಸಾಧಾರಣವಾದ, ಹುಡುಗಿಯೊಬ್ಬಳು ಗವರ್ನೆಸ್ ಕೆಲಸದಲ್ಲಿರುವುದನ್ನು ನೋಡಿದ ಮೇಲೆ ಅವಳನ್ನು ಮೆಚ್ಚಿಕೊಂಡ. ತನ್ನ ಶಕ್ತಿಪೂರ್ಣವಾದ ಧ್ಯೇಯ ಅಭಿಪ್ರಾಯಗಳ ಕೆಳಗೆ ದುರ್ಬಲ

ವಾದ ಹೆಣ್ಣು ಹೃದಯವನ್ನು ಅಡಗಿಸಿಕೊಂಡಿದ್ದ ಮೇರ್ನ್ಯ, ಅವನನ್ನು ಮದುವೆಯಾಗುವದಾಗಿ ಒಪ್ಪಿಕೊಂಡಳು ಈ ಮದುವೆಗೆ ಅಡ್ಡಿಯೇನೂ ಇಲ್ಲವೆಂದು ಇಬ್ಬರಿಗೂ ನಂಬಿಕೆಯಿತ್ತು ಮನೆಯಲ್ಲಿ ಸೇವೆ ಮಾಡುವವಳಾದರೂ ಮೇರ್ನ್ಯಳನ್ನು ಮನೆಯವರೆಲ್ಲ ಅಸಾಧಾರಣ ಗೌರವ ಆದರಗಳಿಂದ ಕಾಣುತ್ತಿದ್ದರು ಕ್ಯಾಸಿಮಿರ್ ತಂದೆ ತಾಯಿಗಳ ಮುಂದೆ ಧೈರ್ಯದಿಂದ ಈ ವಿಷಯ ಪ್ರಸ್ತಾಪಿಸಿದ. ಎಲ್ಲರೂ ನಿರೀಕ್ಷಿಸಬಹುದಾದಕ್ಕಿಂತ ಹೆಚ್ಚಿನದೇನೂ ನಡೆಯಲಿಲ್ಲ ತಂದೆ ಕೋಪದಿಂದ ಉರಿದು ಬಿದ್ದ, ತಾಯಿ ಮೂರ್ಛೆ ಹೋಗುವುದೊಂದು ಬಾಕಿ. ನಾಳೆಯೆಂದರೆ ಐಶ್ವರ್ಯವಂತರ ಹುಡುಗಿಯನ್ನು ಮದುವೆಯಾಗಬಹುದಾದ ತಮ್ಮ ಹಿರಿಯ ಹುಡುಗ ಹೀಗೆ ಮದುವೆಯಾಗುವದೆ? ಒಂದು ಕಾಸಿಗೆ ಗತಿಯಿಲ್ಲದ ಇತರರ ಮನೆಯಲ್ಲಿ ದುಡಿಯುವ ಹುಡುಗಿಯನ್ನು ಶ್ರೀಮಂತರು ಮದುವೆಯಾಗಬಹುದೆ? ಎಷ್ಟೋ ಬೋಧನೆ ಬೈಗಳುಗಳಾದ ಮೇಲೆ ಕ್ಯಾಸಿಮಿರ್ ಆ ಸುದ್ದಿಯನ್ನೇ ಬಿಟ್ಟ. ತಮ್ಮ ಹೆಮ್ಮೆಗೋಸ್ಕರ ಮನೆಯ ಕೆಲಸದವಳಿಗೆ ಯಜಮಾನ ಯಜಮಾನಿಯರು ತೋರಿಸುತ್ತಿದ್ದ ಆದರ ಕರುಣೆಗಳು ಆವಿಯಾಗಿ ಹೋದವು.

ಈ ದುಃಖದ ನೋವಿನಿಂದ ಮೇರ್ನ್ಯ ಹಿಂಡಿ ಹೋದಳು. ದುಃಖ ಕೋಪ ಅಪಮಾನಗಳನ್ನು ತುಂಬಿಕೊಂಡು ಅವಳ ಹೃದಯ ಕಿಡಿ ಕಾರಿತು ತನಗಿಂತ ಎಷ್ಟೋ ವಿಧದಲ್ಲಿ ಕೀಳಾದವರಿಂದ ಹೀಗೆ ಅಪಮಾನಗೊಂಡದ್ದನ್ನು ಸಹಿಸಲಾರದೆ ಅವಳು ಕುಗ್ಗಿ ಹೋದಳು. ಇಂತಹ ಸಂಕಟಕ್ಕೆ ಇನ್ನೆಂದಿಗೂ ಸಿಕ್ಕುವದಿಲ್ಲೆಂದು ಪ್ರತಿಜ್ಞೆ ಮಾಡಿಕೊಂಡಳು. ಈ ಒಣ ಶ್ರೀಮಂತರ ಮನೆಯಿಂದ ತಪ್ಪಿಸಿಕೊಂಡು ಹೋಗಬೇಕೆಂದು ಅವಳ ಮನಸ್ಸು ಹಾತೊರೆಯಿತು. ಆದರೆ ತಂದೆಗೋಸ್ಕರ ಅಕ್ಕನಿಗೋಸ್ಕರ ಮೇರ್ನ್ಯ ಎಲ್ಲವನ್ನೂ ಉಸಿರೆತ್ತದೆ ನುಂಗಿದಳು. ಮುದುಕ ತಂದೆಗೆ ಇಲ್ಲದ ಈ ಹಿಂಸೆಯನ್ನು ಹಚ್ಚಿಡುವುದರಿಂದ ಏನು ಪ್ರಯೋಜನ?

ಇಂತಹ ಹೆಚ್ಚು ಸಂಬಳದ ಕೆಲಸ ಬಿಟ್ಟು ಬಿಟ್ಟರೆ ತನ್ನನ್ನೇ ನಂಬಿ ರುವ ಅಕ್ಕನ ಪಾಡೇನಾಗಬೇಕು ? ಇದನ್ನೆಲ್ಲ ನೆನೆದು ಮೇನ್ನ ತನ್ನನ್ನು ಕಾಡಿಸುತ್ತಿದ್ದ ಚಿಂತೆ ಕೋಪಗಳೆಲ್ಲ ತನ್ನದಲ್ಲವೇನೋ ಎಂಬಂತೆ ಒದರಿ ಕೊಡಹಿಬಿಟ್ಟಳು ಆದ ತಲ್ಲಣವನ್ನೆಲ್ಲ ಬಚ್ಚಿಟ್ಟು ಕೊಂಡಳು ಆದರೂ ಎಷ್ಟು ಪ್ರಯತ್ನಪಟ್ಟರೂ ಈ ಸಂಕಟಗಳಿಂದ ಮೇನ್ನ ತತ್ತರಿಸಿಹೋದಳು. ತನ್ನ ಚಿಕ್ಕಮ್ಮನ ಮಗಳು ಹೇನ್ರಿಯಟ್ಟಳಿಗೆ ಬರೆದ ಕಾಗದದಲ್ಲಿ ಅವಳು ಅದನ್ನು ಒಪ್ಪಿಕೊಂಡಿದ್ದಾಳೆ. 'ನನ್ನ ಭವಿಷ್ಯದ ಯೋಚನೆಗಳೆ ? ಒಂದೂ ಇಲ್ಲ. ಇದ್ದರೂ, ಅತ್ಯಂತ ಸಾಧಾರಣವಾದವುಗಳು ಹೇಳಿಸಿಕೊಳ್ಳತಕ್ಕಂತಹವಲ್ಲ ಆದಷ್ಟು ಪ್ರಯತ್ನಪಟ್ಟು ಯಶಸ್ವಿಯಾಗಲು ನೋಡುತ್ತೇನೆ. ಆಗದೆ ಹೋದರೆ, ನೀಚವಾದ ಪ್ರಪಂಚವನ್ನು ಒಂದೇ ಸಲ ಬಿಟ್ಟು ಹೊರಟು ಹೋಗುತ್ತೇನೆ... ..'

ಇನ್ನೊಂದು ಕಾಗದದಲ್ಲಿ ಮೇನ್ನ ಹೀಗೆ ಬರೆಯುತ್ತಾಳೆ. 'ಈ ಕ್ಷಣದಲ್ಲಿ ನನ್ನ ಭವಿಷ್ಯದ ಆಶೆ ಆಕಾಂಕ್ಷೆಗಳೆಲ್ಲ ಇಷ್ಟೆ ನನ್ನ ಸ್ವಂತ ಗುಡಿಸಲೊಂದರಲ್ಲಿ ತಂದೆಯ ಜೊತೆಯಲ್ಲಿ ವಾಸ ಮಾಡಬೇಕು. ತಂದೆ ನಾನಿಲ್ಲದೆ ತಲ್ಲಣ ಪಡುತ್ತಾನೆ ತನ್ನ ಜೊತೆಯಲ್ಲಿ ನಾನಿರಬೇಕೆಂದು ಆಶಿಸುತ್ತಾನೆ. ನನಗೋಸ್ಕರ ಹಾತೊರೆಯುತ್ತಾನೆ. ಇರುವುದಕ್ಕೊಂದು ಸ್ಥಳ, ಸ್ವಾತಂತ್ರ್ಯ, ಇವೆರಡಕ್ಕೋಸ್ಕರ ನನ್ನ ಅರ್ಧ ಜೀವಮಾನವನ್ನಾದರೂ ಕೊಟ್ಟೇನು ... .... ನನಗೆ ಬೇಕಾದ್ದೆಲ್ಲ ಇಷ್ಟೇ. ಬಾಳು ಚಿಂತೆ ಮಾಡಿ ನರಳುವಷ್ಟು ದೊಡ್ಡ ವಿಷಯವಲ್ಲ !'

ಇಂತಹ ನಿರಾಶೆಗೆ ಮೇನ್ನ ಎಳೆಯತನದಿಂದಲೂ ವೈಯೊಡ್ಡಿ ನಿಂತಿದ್ದ ಬಡತನವೊಂದೇ ಕಾರಣವಲ್ಲ. ಆ ಬಡತನ ಮನೆಯವರನ್ನೆಲ್ಲ ಕಾಡಿಸುತ್ತಿತ್ತು. ಸಂಪಾದಿಸಿದ ದುಡ್ಡನ್ನೆಲ್ಲ ಅಕ್ಕನಿಗೆ ಕಳುಹಿಸಿ ಕೊಟ್ಟಮೇಲೆ ಮೇನ್ನಳ ಹತ್ತಿರ ಸ್ವಂತಕ್ಕೋಸ್ಕರ ಕಾಸುಳಿಯುವದೇ ಕಷ್ಟವಾಗುತ್ತಿತ್ತು. ಅಣ್ಣನಿಗೆ ಕಾಗದ ಬರಯು

ವಾಗ ಅವಳು ಅದನ್ನು ಸೂಚಿಸಿದ್ದಾಳೆ. "ಪ್ರಿಯ ಜೊಸ್ಸೈಯೊ, ಈ ಕಾಗದದ ಮೇಲೆ ನನ್ನ ಬಳಿ ಇರುವ ಕೊನೆಯ ಸ್ಟ್ಯಾಂಪನ್ನು ಹಚ್ಚುತ್ತಿದ್ದೇನೆ. ಈಗ ನನ್ನ ಬಳಿ ಒಂದೇ ಒಂದು ಪೆನ್ನಿ ಕೂಡ ಇಲ್ಲದೆ ಇರುವುದರಿಂದ ಅಕಸ್ಮಾತ್ ಎಲ್ಲಾದರೂ ಒಂದು ಸ್ಟ್ಯಾಂಪು ನನಗೆ ಸಿಕ್ಕದ ಹೊರತು ರಜದ ತನಕ ಬಹುಶ: ನಿನಗೆ ಕಾಗದ ಬರೆಯಲಾಗುವದಿಲ್ಲ.

'ಈ ಕಾಗದ ಬರೆಯುತ್ತಿರುವುದರ ನಿಜವಾದ ಉದ್ದೇಶ ನಿನ್ನ ಹುಟ್ಟಿದ ಹಬ್ಬದ ಸಮಯದಲ್ಲಿ ನಿನಗೆ ಒಳ್ಳೆಯದನ್ನು ಹಾರೈಸುವದಕ್ಕೆ ತಡವಾಗಿದ್ದರೆ ಕಾಸಾಗಲಿ ಸ್ಟ್ಯಾಂಪಾಗಲಿ ಇಲ್ಲದ ಸಂಕಟದಿಂದ ಇದರಿಂದ ತುಂಬ ಹಿಂಸೆಯೇನೋ ಆಗುತ್ತದೆ. ಆದರೂ ಅದಕ್ಕೋಸ್ಕರ ಯಾರಲ್ಲಿಯೂ ಬೇಡುವುದನ್ನು ನಾನಿನ್ನೂ ಕಲಿತಿಲ್ಲ.

'ನನ್ನ ಪ್ರಿಯ ಅಣ್ಣನಾದ ಜೊಸ್ಸೈಯೊ, ಕೆಲವು ದಿವಸಗಳ ಮಟ್ಟಿಗಾದರೂ ವಾಸರ್‌ಕ್ಕೆ ಬರಬೇಕೆಂದು ಮನಸ್ಸು ಹಾತೊರೆದು ತುಡಿದುಕೊಳ್ಳುತ್ತದೆ. ಹೊರಗಿನ ನನ್ನ ಉಡುಪು ಹಳೆಯದಾಗಿ ಹರಿದು ಹೋಗಿರುವುದನ್ನು ನಾನು ಹೆಚ್ಚಾಗಿ ಹಚ್ಚಿಕೊಳ್ಳುವ ದಿಲ್ಲ. ಆದರೆ ಒಳಗಿನ ಆತ್ಮಕೂಡ ನವೆದು ಸಣ್ಣಾಗಿ ಹೋಗಿದೆ.

'ಬ್ರೋನ್ಯ' ನನಗೆ ಕಾಗದ ಬರೆದು ಎಷ್ಟೋ ದಿನಗಳಾಗಿ ಹೋಯಿತು. ಅವಳ ಬಳಿಯೂ ಸ್ಟ್ಯಾಂಪು ಇಲ್ಲ ಎಂದೇ ಕಾಣು ತ್ತದೆ.

ಮನಸ್ಸನ್ನು ಹಿಂಡಿ ಹಾಕುತ್ತಿದ್ದ ಈ ನೋವು ಹಿಂಸೆಗಳ ನ್ನೆಲ್ಲ ಮೇನ್ಯ ತನ್ನ ಹೃದಯದಲ್ಲಿ ಬಚ್ಚಿಟ್ಟುಕೊಂಡು ತನ್ನ ಮನೆಯವರ ಶ್ರೇಯಸ್ಸನ್ನು ಕೋರುವ ಚಿಂತೆಯಲ್ಲಿ ತೊಡಗಿದಳು.

ಇಂತಿಂತಹ ಕಷ್ಟಗಳು ಮುತ್ತಿ ಕಾಡಿದ್ದರೂ ಮೇನ್ಯ ಓದು ವುದನ್ನು ಮಾತ್ರ ಬಿಡಲಿಲ್ಲ. ವಿಶ್ವವಿದ್ಯಾಲಯದಲ್ಲಿ ಓದುವುದು ಸಾಗದೆ ಹೋಗಿ ಕೆಲಸ ಮಾಡುವವರ ಮನೆಯಲ್ಲಿ ಅವಮಾನ

ಪಟ್ಟು, ಬಾಳೇ ಹದಕೆಟ್ಟಿತೆಂದು ನಿರಾಶೆಯಲ್ಲಿ ಕಂಗೆಟ್ಟಿದ್ದ ಅಂತಹ ಸ್ಥಿತಿಯಲ್ಲಿ ಅವಳನ್ನು ಓದಲು ಪ್ರಚೋದಿಸಿದ ಆ ಶಕ್ತಿ ಅಗಾಧ ವಾದ ಮಹಾಶಕ್ತಿ ಮೋನ್ನಳಿಗೆ ಅದೇನೂ ಹೆಚ್ಚೆಂದು ತೋರು ತ್ತಿರಲಿಲ್ಲ ಓದು, ಜ್ಞಾನಾರ್ಜನೆ ಅವಳ ಬಾಳಿಗೆ ಅಂಟಿ ಬಂದಿ ದ್ದುವು. ಸರ್ವದಾ ಮನಸ್ಸನ್ನು ಹಿಂಡುತ್ತಿದ್ದ ಚಿಂತೆಗಳಿಂದ ಎಂತಹ ಪ್ರಯತ್ನ ಮಾಡಿ ಬಾಳನ್ನೂ ಬುದ್ಧಿಯನ್ನೂ ಬೇರೆ ಕಡೆಗೆ ತಿರುಗಿಸಿಕೊಳ್ಳುತ್ತಿದ್ದಳೆಂದು ಮೋನ್ನಳೇ ಬರೆಯುತ್ತಾಳೆ.

— ಶ್ರೀಮತಿ ಕೆ. ವಿ. ರತ್ನಮ್ಮ



# ಪರಿಚಯ

---

ಶ್ರೀಮತಿ ಕೆ. ವಿ ರತ್ನಮ್ಮನವರು ಸುಪ್ರಸಿದ್ಧ ಸಾಹಿತಿಗಳಾದ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರ ಸುಪುತ್ರಿಯರು; ಬಿ ಎಸ್ ಸಿ. ಪದವೀಧರರು. ಕನ್ನಡ ಸಾಹಿತ್ಯದಲ್ಲಿ 'ವಿಜ್ಞಾನ ಸಾಹಿತ್ಯ'ವೂ ಚನ್ನಾಗಿ ರೂಪುಗೊಳ್ಳುವಂತೆ ಮನವಾರೆ ಪ್ರಯತ್ನಿಸುವ ಮಹತ್ವಾಕಾಂಕ್ಷೆಯುಳ್ಳವರು. ಉತ್ತಮವಾದ ಭಾಷಾಪ್ರೌಢಿಮೆಯನ್ನೂ, ಸುಂದರವಾದ ಶೈಲಿಯನ್ನೂ ಸ್ಪಷ್ಟವಾದ ನಿರೂಪಣ ಶಕ್ತಿಯನ್ನೂ ತಮ್ಮದಾಗಿಸಿಕೊಂಡವರು. ಇವರಿಂದ ಕನ್ನಡ ಸಾಹಿತ್ಯ ಪ್ರಪಂಚಕ್ಕೂ, ವಿಜ್ಞಾನ-ಸಾಹಿತ್ಯಕ್ಕೂ ಉಜ್ವಲವಾದ ಸಾಹಿತ್ಯ ಸಲ್ಲಬಹುದಾಗಿದೆ.

**ಕಥಾಸಂದರ್ಭ:—**

ಮನೋಹರ ಗ್ರಂಥಮಾಲೆಯ **'ಮೆಡಮ್ ಕ್ಯೂರಿ'** ಎಂಬ ಪುಸ್ತಕದಿಂದ ಈ ಅವತರಣಿಕೆಯನ್ನು ಆಯ್ದು ಕೊಂಡಿದೆ.

ಪೋಲಂಡಿನ ಒಂದು ಸಾಮಾನ್ಯ ಮನೆತನದಲ್ಲಿ 'ಮೆಡಮ್‌ಕ್ಯೂರಿ' ಎಂದು ಲೋಕಪ್ರಸಿದ್ಧಿಯನ್ನು ಹೊಂದಿದ ಮೇನ್ಯಳು ಜನ್ಮ ತಾಳಿದಳು ತಾಯಿ ತಂದೆಗಳಿಗೆ ಇವಳು ಕಿರಿಯ ಮಗಳು. ಬ್ರೋನ್ಯ ಇವರ ಹಿರಿಯ ಅಕ್ಕ. ಬಡತನದ ಮೂಲಕ ವಿಪತ್ಪರಂಪರೆ ಹೆಚ್ಚಿತು. ಆದರೆ ಬ್ರೋನ್ಯಳಿಗೆ ಪ್ಯಾರಿಸ್ಸಿಗೆ ಹೋಗಿ ಡಾಕ್ಟರ ಪರೀಕ್ಷೆಗೆ ಓದಬೇಕೆಂಬ ಆಶೆ ಬ್ರೋನ್ಯ ಮೇನ್ಯಳಿಗೆ ತಾಯಿಯಂತಿದ್ದಳು. ಅವಳ ಅಂತಃಕರಣದ ತಳಮಳವನ್ನು ಕಂಡು ಮೇನ್ಯಳಿಗೆ ಸಹಿಸದಾಯಿತು. ಕೊನೆಗೆ ಅಕ್ಕನ ವಿದ್ಯಾಭ್ಯಾಸಕ್ಕಾಗಿ ತಾನೇ ತ್ಯಾಗಮಾಡಲು ಸಿದ್ಧಳಾದಳು ಬ್ರೋನ್ಯಳನ್ನು ಹೇಗಾದರೂ ಒಪ್ಪಿಸಿ ಅವಳನ್ನು ಪ್ಯಾರಿಸ್ಸಿಗೆ ಕಳಿಸಿದಳು. ತಾನು ಹೆಚ್ಚಿನ ಸಂಬಳದ ಒಂದು ಕೆಲಸಕ್ಕಾಗಿ ಮನಸ್ಸಿಲ್ಲದಿದ್ದರೂ ಒಂದು ಹಳ್ಳಿಗೆ ಹೋಗುವದನ್ನು ನಿಶ್ಚಯಿಸಿದಳು

ಅಭ್ಯಾಸಃ—

## (ಅ) ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿಃ---

೧) ಈ ಪಾಠದಲ್ಲಿ ಬಂದ ಮೇನ್ನಳ ಜೀವನ ವೃತ್ತಾಂತವನ್ನು ಸ್ವಲ್ಪದರಲ್ಲಿ ಬರೆಯಿರಿ. ವಿಶೇಷವಾಗಿ ಅವಳ ಮನಸ್ಥಿತಿಯನ್ನು ಸ್ಪಷ್ಟ ಶಬ್ದಗಳಲ್ಲಿ ಚಿತ್ರಿಸಿರಿ.

೨) ಸಿರಿವಂತಿಕೆ ಮತ್ತು ಬಡತನ ಇವುಗಳ ಬಗ್ಗೆ ಮೇನ್ನಳ ಅಭಿಪ್ರಾಯವೇನಿದೆ ?

೩) ಕ್ಯೂರಿಯ ಜೀವನದ ಯಾವ ಅಂಶಗಳು ವಿದ್ಯಾರ್ಥಿಗಳಿಗೆ ಆದರ್ಶವಾಗಿಯೂ ಅನುಕರಣೀಯವಾಗಿಯೂ ಕಾಣಬಹುದು?

೪) ಇಲ್ಲಿ ವರ್ಣಿಸಲ್ಪಟ್ಟ ಕ್ಯೂರಿಯು ಓರ್ವ ಚಿಕ್ಕ ತ್ಯಾಗಜೀವಿಯೆನ್ನಬಹುದು. ಅದು ಹೇಗೆ ?

೫) 'ಕ್ಯೂರಿಯು ಶುದ್ಧ ಪ್ರೀತಿಯ ಪ್ರತಿಮೆ' ಈ ಮಾತನ್ನು ಸಮರ್ಥಿಸಿರಿ.

೬) ಕಡೆಗೆ ಕ್ಯೂರಿಯು ದೊಡ್ಡ ವಿಜ್ಞಾನಿಯಾಗುತ್ತಾಳೆ ಇದಕ್ಕೆ ಅವಳಲ್ಲಿಯ ಯಾವ ಗುಣಗಳು ಕಾರಣವಾಗಿರಬಹುದು ? ಮತ್ತು ಹೇಗೆ ?

೭) ಓದಿಯಾಗಲಿ ಇಲ್ಲವೆ ಶಿಕ್ಷಕರ ಸಹಾಯದಿಂದಾಗಲಿ ಬೇರೆ ಮೂವರು ಶಾಸ್ತ್ರಜ್ಞರ ಪರಿಚಯವನ್ನು ಮಾಡಿಕೊಳ್ಳಿರಿ

೮) ನಿಮ್ಮ ಗೆಳೆಯನ ಹುಟ್ಟು ಹಬ್ಬದ ಸಂದರ್ಭದಲ್ಲಿ ಅತನಿಗೊಂದು ಓಲೆಯನ್ನು ಬರೆಯಿರಿ.

೯) ಈ ಶಬ್ದಗಳ ಅರ್ಥವನ್ನೂ ಉಪಯೋಗವನ್ನೂ ಚೆನ್ನಾಗಿ ತಿಳಿದುಕೊಂಡು ನಿಮ್ಮ ಸ್ವಂತ ವಾಕ್ಯಗಳಲ್ಲಿ ಉಪಯೋಗಿಸಿರಿ: ನೀರಸ, ಮರಳಿನಲ್ಲಿ ಮನೆಕಟ್ಟು, ಮನಸ್ಸನ್ನು ಹಿಂಡು, ಅವಿಯಾಗು, ಕೊಡವಿ ಬಿಡು, ಹದಗೆಡು, ಕಂಗೆಡು.

೧೦) ವಿರುದ್ಧ ಪದಗಳನ್ನು ಕೊಡಿರಿ:—
ದುರ್ಬಲ, ಆದರ ಸ್ವಾತಂತ್ರ್ಯ, ಗಣ್ಯ, ಆಶೆ, ಅಪರಾಧಿ,

**ವ್ಯಾಕರಣ:—**

### ಕೆಳಗಿನ ವಾಕ್ಯಗಳನ್ನು ಅವುಗಳ ಮುಂದೆ ಕಂಸದಲ್ಲಿ ಸೂಚಿಸಿದಂತೆ ಬದಲಿಸಿ ಬರೆಯಿರಿ.

೧) ನಾವು ಮಾಡಬೇಕಾದ ಕೆಲಸಗಳು ಎಷ್ಟೋ ಇವೆ. ಅವುಗಳಲ್ಲಿ ಇದು ಒಂದು. (ಒಂದೇ ಸಾಮಾನ್ಯ ವಾಕ್ಯ ಮಾಡಿರಿ.)

೨) ವಿಚಾರಿಸದೆ ಕೆಲಸವನ್ನು ಕೈಕೊಂಡುದರಿಂದ ಈ ಗತಿಯಾಯಿತು. (ಸಂಯುಕ್ತ ವಾಕ್ಯವನ್ನು ಮಾಡಿರಿ.)

೩) ನಮ್ಮ ಊಟವಾಯಿತು; ಕೂಡಲೆ ನಾನು ಹೊರಟೆನು. (ಸಂಮಿಶ್ರ ವಾಕ್ಯ ಮಾಡಿರಿ.)

೪) ಅವನೆಂಥ ಶೂರನು! (ಪ್ರಶ್ನಾರ್ಥಕ ಪಾಕ್ಯ ಮಾಡಿರಿ)

೫) ನಾನು ಈ ಕೆಲಸವನ್ನು ಮಾಡಲಾಪೆನೆ? (ನಿಷೇಧಾರ್ಥಕ ವಾಕ್ಯ ಮಾಡಿರಿ.)



# ೧೨. ಉಗುಳುವದು

**ವಿಷಯ ಪ್ರವೇಶ.**— ಓದುವಣ್ಣಗಳಿರಾ, ಛೀ ಇದೇನು ಮಹಾ ವಿಷಯ ಎಂದು ಈ ಪುಟಗಳನ್ನು ಉಗುಳು ಹಚ್ಚಿ ತಿರುವಿ ಹಾಕಿ ಮುಂದೆ ಸಾಗಬೇಡಿರಿ. ಇದೆಲ್ಲರ ಬಾಯೊಳಗಿನ ವಿಷಯ ಎಂದು ಅಲ್ಲಗಳೆಯಬೇಡಿರಿ. ಬಾಯೊಳಗಿನದಿದ್ದಷ್ಟಕ್ಕೆ ಎಲ್ಲರ ಕೈಯೊಳಗಿನದು ಎಂದು ಹೇಳಬರುವದಿಲ್ಲ. ನಮ್ಮ ನಮ್ಮ ನಾಲಿಗೆ ನಮ್ಮ ನಮ್ಮ ಬಾಯೊಳಗಿದ್ದರೂ ನಮ್ಮ ನಮ್ಮ ಕೈಯೊಳಗಿದೆಯೇ ? ಹಾಗೆಯೇ —ಉಗುಳು.

ಓಕಳಿಯಾಡುವ ಜೇಕಳಿಯಂತೆ, ಹಗಲು ಹನ್ನೆರಡು ತಿಂಗಳೂ 'ರಂಗಪಂಚಮಿಯನ್ನು ನೆರವೇರಿಸುವವರಂತೆ, ಪಿಚ್ಚಿ ಪಿಚ್ಚಿ ಎಲೆಗಳನ್ನು ನಿಮಿಷಾರ್ಧದಲ್ಲಿ ಅರೆದು ಅಗಿದು ಪಿಚಿ ಪಿಚಿ ಉಗುಳುವ ತಂಬುಲ-ಪೆಚ್ಚರಾದ ಆ ಸದಾನಂದಿಗಳ ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ ಅದು ಸಮಾಜ ಶಾಸ್ತ್ರದೊಳಗಿನ ಮಹಾ ವಿಷಯ "ಬೇರ್ಕಿ" ನಾಯಿಗಳಂತೆಯೂ ಮೋಷಗೊಳಿಸುವ ಫಿರಂಗಿಗಳಂತೆಯೂ ಲೊಳಲೊಳನೆ ಧಡಂಧುಡಂನೆ ಶಬ್ದದಿಂದ ಕಳ್ಳರನ್ನೂ ಹುಳ್ಳುಳ್ಳಗೆ ಮಾಡುವ ದೈವ ಸಾವಧಾನಿಗಳಾದ ಉಗುಳುಬಡುಕರ ಬಗ್ಗೆಯೂ ಬರೆಯಲು ಇದು ಸ್ಥಳವಲ್ಲ ಅದು ನಾಗರಿಕ ಧರ್ಮಶಾಸ್ತ್ರದ ಭಾಗ

ಆದರೂ ಈ ಮಹತ್ವದ ವಿಷಯದ ಬಗ್ಗೆ ನನ್ನ ಅಲ್ಪ ಮತಿಗೆ ತಿಳಿದಷ್ಟು ಬರೆಯುವದು ಕರ್ತವ್ಯವಾಗಿದೆ.

**ಉಗುಳುವದು ಮತ್ತು ಆರೋಗ್ಯ ಶಾಸ್ತ್ರ:**— ಮನುಷ್ಯರು ಹೇಳುತ್ತಾರೆ- ತಾವು ತಮ್ಮ ಹಿರಿಯರ ಉಗುಳು ದಾಟುತ್ತಿದ್ದಿಲ್ಲವೆಂದು ಹೌದು, ದಾಟ ದಾಟುವುದರಲ್ಲಿ ತಪ್ಪಿ ಆದರ

ಮೇಲೆಯೇ ಕಾಲು ಬಿದ್ದರೆ ರೋಗ ಅಂಟುವ ಸಂಭವ ಬಹಳ. ಯಾರ ಉಗುಳು ಹೇಗೋ ಯಾರು ಬಲ್ಲರು? ಉಗುಳು ರೋಗದ ಉಗಮ! ಉಗುಳಿ ಉಗುಳಿ ರೋಗ, ಬೊಗುಳಿ ಬೊಗುಳಿ ರಾಗ, ಎಂದು ಜನಪದ ವೇದವಾಕ್ಯವಿಲ್ಲವೇ! ರೋಗಿಯು ಉಗಳಿನ ಬಗ್ಗೆ ಡಾಕ್ಟರರು ಎಚ್ಚರ ಪಡಲು ಹೇಳುವಷ್ಟು ತಾವು ಔಷಧ ರೂಪವಾಗಿ ಕೊಡುವ ವಿಷದ ಬಗ್ಗೆಯೂ ಹೇಳುವದಿಲ್ಲ ಉಗುಳು ಮನುಷ್ಯನಲ್ಲಿರುವ ಮಹಾಶಕ್ತಿ ಅದನ್ನು ವಿಧಾಯಕ ಅಥವಾ ವಿಘಾತಕ ಮಾಡುವದು ನಮ್ಮ ವಿವೇಕ ಅವಿವೇಕಗಳನ್ನವಲಂಬಿಸಿರುವದು. ಉಗುಳುವದು ಮನುಷ್ಯನ ಲಕ್ಷಣ.

**ಉಗುಳುವುದು ಮತ್ತು ಮಾನವನ ಅನನ್ಯ ಸಾಮಾನ್ಯ ಲಕ್ಷಣ**

ಮಾನವನ ಅನನ್ಯ-ಸಾಮಾನ್ಯ ಲಕ್ಷಣವೇನು ಎಂಬುದರ ಬಗ್ಗೆ ಶಾಸ್ತ್ರಕಾರರೂ ಬಹಳೇ ಪೇಚಾಡಿರುವರು "ನಗುವವನು ಮನುಷ್ಯ" ಎಂದು ಲಕ್ಷಣ ಮಾಡಿದರೆ 'ಹೈನಾ' ಎಂಬ ಪಶುವೂ ನಗುವದು, ರಾಜತಂತ್ರಜ್ಞರೂ ನಗುತ್ತಾರೆ-ಅದರಲ್ಲಿ ಮಾನವನ ಹೃದಯ ಕಂಡುಬರುವದಿಲ್ಲ —ಹೀಗಾಗಿ ಮೇಲಿನ ವ್ಯಾಖ್ಯೆಗೆ ಬಾಧೆ ಬರುತ್ತದೆ. 'ಮಾತಾಡುವವನು ಮನುಷ್ಯ' ಎಂದರೆ ಪಂಡಿತವಕ್ಕಿ (ಗಿಳಿ) ಯೂ ಮಾತಾಡುವದು, ಪಂಡಿತರೂ ಮಾತಾಡುವರು-ಅದರಲ್ಲಿ ಮಾನವ ಬುದ್ಧಿ ಕಂಡು ಬರುವದಿಲ್ಲ—ಮತ್ತೆ ಬಾಧೆ ಬಂತು. 'ಎರಡು ಕಾಲುಗಳುಳ್ಳ ಪ್ರಾಣಿ ಮನುಷ್ಯನು' ಎಂದು ಹೇಳಬೇಕೆಂದರೆ, ಕಾಗೆಗೂ ಎರಡು ಕಾಲು; ಗೂಗೆಗೂ ಎರಡು ಕಾಲು. 'ತರ್ಕ ತಿಳುವಳಿಕೆಯುಳ್ಳವನೇ ಮನುಷ್ಯ' ಎನ್ನಬೇಕೆ? ಕೆಲ ಕೆಲವು ನಾಯಿಗಳಿಗೆ ಇದ್ದಷ್ಟು ತರ್ಕ, ತಿಳುವಳಿಕೆ-ಹಲಕೆಲವು ನಾಗರಿಕರಿಗಿರುವದಿಲ್ಲ. ಅದರಲ್ಲಿ ರಂಗಭೂಮಿಯೊಳಗಿನವರೂ ಬಂದರು, ಹೊರಗಿನವರೂ ಬಂದರು ಹಾಗಾದರೆ 'ಉಗುಳುವವನೇ ಮನುಷ್ಯ" ಎಂದು ನಾನು ಸೂಚಿಸುತ್ತೇನೆ ತನ್ನ ಅರುಚಿ

ಅಸಮ್ಮತಿ, ಅಸಹ್ಯಗಳನ್ನು ಅತಿ ತೀವ್ರವಾಗಿ ಆದರೆ ತೀರ ಸಂಕ್ಷಿಪ್ತವಾಗಿ ವ್ಯಕ್ತಮಾಡುವ ಒಂದೇ ಒಂದು ಸಾಧನವೆಂದರೆ ಉಗುಳುವುದು; ಅದು ಮಾನವನೊಬ್ಬನಿಗೇ ಸಾಧ್ಯ. ಉಳಿದ ಪಶುಪಕ್ಷಿಗಳಿಗೆ ಸಾಧ್ಯವಿಲ್ಲ. ಅವಿವೇಕಿಗಳಿಗೆ ಬುದ್ಧಿಯುಂಟಾಗ ಬೇಕಾದರೆ ನಾಲ್ಕುಜನರ ಕಡೆಯಿಂದ ಉಗುಳಿಸುವ ಉಪಾಯವನ್ನೇನೋ ಹೇಳುವರು. ಆದರೆ ತಕ್ಕ ಹೊತ್ತಿನಲ್ಲಿ ತಕ್ಕಮಟ್ಟಿಗೆ ತಕ್ಕದಲ್ಲದ್ದರ ಬಗ್ಗೆ ತಕ್ಕ ರೀತಿಯಲ್ಲಿ ಉಗುಳುವ ಶಾಸ್ತ್ರವನ್ನೂ ಕಲೆಯನ್ನೂ ಬಲ್ಲವರು ಮಾನವರಲ್ಲಿಯೂ ಕಡಿಮೆ ಕಂಡಕಂಡಲ್ಲಿ ಸಿಕ್ಕಸಿಕ್ಕಹಾಗೆ, ಬೇಕುಬೇಕಾದಂತೆ ಉಗುಳುವವರೇ ಹೆಚ್ಚು ಉಸುರಾಡಿಸಲಿಕ್ಕೆ ಬಂದವರೆಲ್ಲರಿಗೂ ಹಠಯೋಗ ಬಂದೇಬರುವದೆಂದಲ್ಲ; ಅಂತೆಯೆ ಜಗತ್ತಿನಲ್ಲಿ ಆಗಬೇಕಾದಷ್ಟು ಸುಧಾರಣೆಯಾಗಲೊಲ್ಲದು.

**ಉಗುಳುವದು ಮತ್ತು ನಾಟ್ಯಕಲೆ:—**

ನಮಗೆ ನೆಟ್ಟಗೆ ಉಗುಳಲಿಕ್ಕೆ ಬರುವದಿಲ್ಲವಾದ್ದರಿಂದಲೇ ನಾಟ್ಯಕಲೆಯಲ್ಲಿ ತಿದ್ದುಪಡೆಯಾಗಿಲ್ಲ. ನಾಟಕಗೃಹದಲ್ಲಿ "Don't Spit" "ಉಗುಳಬಾರದು" ಎಂದು ಬರೆದುದನ್ನು ವಾಚಕರು ಓದಿರಬಹುದು. ಇನ್ನು, ಉಗುಳಿಸಿಕೊಳ್ಳುವಂಥ ಅನೇಕ ಪ್ರಸಂಗಗಳು ತಮ್ಮ ನಾಟಕದಲ್ಲಿಯೂ ಅಭಿನಯಾದಿಗಳಲ್ಲಿಯೂ ಇರುವವೆಂಬ ಭೀತಿಯಿಂದಲೂ, ಮುಂಜಾಗ್ರತೆಯಿಂದಲೂ ನಾಟಕದವರು ಹಾಗೆ ಬರೆಯಿಸಿರುವದೇನೋ ಅವರಿಗೆ ಹಿತ. ಆದರೆ ನೋಡುವವರಿಗೆ ಇಂದಿಲ್ಲ ನಾಳೆ ಹಿತವಾಗಬೇಕಾದರೆ 'ಉಗುಳಬೇಕಾದಲ್ಲಿ ಉಗುಳತಕ್ಕವರೇ' ಎಂದು ನೋಡುವವರು ನಾಟಕೀಯ ಕಾಯಿದೆ ಭಂಗವನ್ನು ಸವಿನಯವಾಗಿ ಮಾಡಲಿಕ್ಕೆ ಬೇಕು. ಇಷ್ಟಾಗಿ, ನಾವು ನಾಟಕಗೃಹಗಳಲ್ಲಿ ಉಗುಳುವುದನ್ನು ಬಿಟ್ಟಿರುವೆವೋ? ಅದೂ ಇಲ್ಲ; ಕೆಳಗೆ ಉಗುಳುತ್ತೇವೆ—ಕೆಳಗೆ. ಇದು ಉಗುಳುವದರ ಅಧಃಪಾತವೇ ಸೈ ನೆಟ್ಟಗೆ ಉಗುಳಿದರೆ ಆಡುವವರಿಗೆ

ಹಿತ, ನೋಡುವವರಿಗೂ ಹಿತ; ಇಂಥ ಕಾಲಕ್ಕೆ ಉಗುಳುನುಂಗಿ ಸುಮ್ಮನೆ ಕೂಡ್ರುವದರಲ್ಲಿ ಅರ್ಥವಿಲ್ಲ. “ಉಗುಳು ನುಂಗಿದರೆ ಹೊಟ್ಟೆ ತುಂಬುವದೇ” ? ಎಂದು ಕೇಳುವರು ನೋಡುವವರು ಉಗುಳು ನುಂಗಿಕೊಂಡಿಂದಿದ್ದರೆ ಆಡುವವರ ಹೊಟ್ಟೆ ತುಂಬು ತ್ತಿತ್ತೇ ? ಸುತ್ತು ಮುತ್ತಲು ನೋಡಲು ಜನರು ಕುಳಿತಿರುವಾಗ ಉಗುಳುವದು ಹೇಗೆ ? ಎಂದು ಯಾರಾದರೂ ಕೇಳಬಹುದು ಇದು ಸಮಂಜಸವಾದ ಪ್ರಶ್ನೆ. ಆದರೆ ಇದಕ್ಕೆ ಉತ್ತರರೂಪವಾಗಿ ಇನ್ನೊಂದು ಲೇಖವನ್ನೇ ಬರೆಯಬೇಕಾದೀತು ? ಮಹಾ-ನಾಟ್ಯ ಕವಿ ಶೆಕ್ಸಪಿಯರನು ಉಗುಳಿನ ಬಗ್ಗೆ ಒಂದು ನಾಟಕವನ್ನೇ ಬರೆದಿದ್ದಾನೆ ‘ಅದಾವ ನಾಟಕ’ ಎನ್ನುವಿರಾ ? ‘Merchant of Venice’ ಸುರತನಗರದ ಶ್ರೇಷ್ಠಿ ಅದು ! ಅಂಟೋನಿಯೋ ಬೆಸಾನಿಯೊ ಇಬ್ಬರು ಜೀವದ ಗೆಳೆಯರು, ಒಬ್ಬರೊಬ್ಬರು ಹಾಕಿದ ಉಗುಳು ದಾಟುತ್ತಿರಲಿಲ್ಲ. ಇವರಿಬ್ಬರೂ ಒಮ್ಮೆ ಶಾಯ ಲಾಕ್‌ನ ಮೋರೆಯ ಮೇಲೆ ಉಗುಳಿದರು— ಅವನು ಬಹಳ ನಿರ್ದಯನಾದ ಸಾಹುಕಾರಿಕೆಯ ಬಡ್ಡಿಯವನು ಎಂದು ಇದೇ ಅಂಟೋನಿಯೋನ ಜೀವಕ್ಕೆ ಮೂಲವಾಯಿತು ಶಾಯ ಲಾಕ್‌ನು ಒಳಗಿಂದೊಳಗೆ ಕಿಡಿಯುಗುಳಿದನು, ಬೆಂಕಿ ಕಾರಿದನು. ಮುಂದೆ ಇವನ ಹತ್ತರವೇ ಅವರಿಗೆ ಅಂಟೋನಿಯೋನ ಜೀವ ಒತ್ತೆಯಿಟ್ಟು ಲಕ್ಷಾವಧಿ ಹಣ ತರಬೇಕಾಯಿತು. ಅವಧಿಯೊ ಳಗೆ ಹಣ ಕೊಡುವದ ಗದಿದ್ದುದರಿಂದ ಜೀವ ಕಳಕೊಳ್ಳುವ ಹೊತ್ತು ಬಂತು ಡ್ಯೂಕನೂ ಪೋರ್ಶಿಯಾ ಇವಳೂ ಶಾಯ ಲಾಕ್‌ನನ್ನು ಹೊಗಳಿ ನೋಡಿದರು. ಗ್ರ್ಯಾಶಿಯಾನೋನು ಬೊಗಳಿ ನೋಡಿದನು. ಆದರೆ ಕಾಯಿದೆ ಪುಸ್ತಕಗಳ ಮೇಲೆ ಸ್ವಲ್ಪ ಉಗುಳು ವೆಚ್ಚ ಮಾಡಿದ ಬೆಲೆರಿಯೋ ಪಂಡಿತನ ಸೂಚನೆಯ ಮೇರೆಗೆ ಅಂಟೋನಿಯೋನು ಉಳಿದುಕೊಂಡನು. ಏನೋ ಯಮ ರಾಜನು ಅರೆನುಂಗಿದ ತುತ್ತನ್ನು ಉಗುಳಿದನು ಉಗುಳುವದ

ರಲ್ಲಿ ತಪ್ಪಾಗಿದ್ದರಿಂದಲೇ ಆ ಅನಾಹುತವಾಯಿತು. ಆದರೆ ವ್ಹೆನಿಸ್ ನಗರದವರೆಲ್ಲರೂ ಹೊತ್ತಿಗೇ ಎಚ್ಚತ್ತು ನಾಲ್ಕು ಜನರು ಶಾಯಲಾಕ್‌ಸಿಗೆ ನೆಟ್ಟಗೆ ಉಗುಳಿದ್ದರೆ ಈ ಗಂಡಾಂತರವೇ ಬರುತ್ತಿರಲಿಲ್ಲ

**ಉಗುಳುವದು ಮತ್ತು ರಾಜಕೀಯ ಚಳುವಳಿಯು:—**

ಉಗುಳುವದು ಮಾನವನ ಹಕ್ಕು— ಜನ್ಮಸಿದ್ಧ ಹಕ್ಕು. ಈಗ ಎಷ್ಟೋ ಜನರು ನಿಷೇಧ-ಸಭೆಗಳಲ್ಲಿ ವ್ಯರ್ಥ ಉಸುರುಗರೆದು ಕೊಳ್ಳುವರು. ಹಾಗೆ ಮಾಡದೆ ಉಗುಳುವ ತಮ್ಮ ಜನ್ಮಸಿದ್ಧ ಹಕ್ಕನ್ನು ಉಪಯೋಗಿಸಿದರೆ ಎಷ್ಟೋ ಆಯಾಸವು ಕಡಿಮೆ ಯಾಗುವದು ಉಗುಳುವಂಥ ತೀವ್ರ ನಿಷೇಧವು ಬೇರೆ ಯಾವುದೂ ಇಲ್ಲ ಅದು ಬುದ್ಧಿ ಕಳೆದುಕೊಂಡವರಲ್ಲಿ ಶುದ್ಧಿಯನ್ನುಂಟು ಮಾಡುವದು ಉಗುಳು ಪವಿತ್ರ ಉಗುಳುವದು ಅಶುದ್ಧವೆಂದು ನೀರಮುಡಿವಂತರು ಹೇಳುವರು; ಅದು ಶುದ್ಧ ತಪ್ಪು. ಉಗುಳು ಸದೈವ ನಿರ್ಮಲ ರೀತಿಯಲ್ಲಿ ತಪ್ಪಿದರೆ ಮಾತ್ರ ಹೋಯಿತು. ನಮಗೆ ಬೇಡಾದದ್ದರ ಮೇಲೆ ಬರಿ ಉಗುಳುವದರಿಂದ ನಿಷೇಧದ ಕಾರ್ಯವು ತೀರಿ ಹೋಗುವದು ಆದರೆ ಉಗುಳುವದು ಮಹಾ ಶಕ್ತಿ. ಎಲ್ಲರಿಗ್ಯೂ ತಕ್ಕ ರೀತಿಯಲ್ಲಿ ಉಪಯೋಗಿಸಲು ಬರದು. ಈ ಕಲಿಯುಗವು ಹೋಗಿ ಮತ್ತೆ ಸತ್ಯ ಯುಗವು ಬರುವಾಗ ಎಲ್ಲರಿಗೂ ಈ ಅಧಿಕಾರವನ್ನು ಉಪಯೋಗಿಸುವ ಬುದ್ಧಿಯು ಬರುವಂತೆ ತೋರುತ್ತದೆ.

ಸ್ವಭಾವ ಭೇದದಿಂದ ಉಗುಳುವ ಸೂಕ್ಷ್ಮತೆಯಲ್ಲಿಯೂ ಭೇದವುಂಟಾಗುವದು. ತಾಮಸಿಯು 'ಖ್ಯಾಕ್' ಎಂದುಗುಳು ವನು. ರಾಜಸನು "ಥೂ" ಎನ್ನುವನು. ಸಾತ್ವಿಕನು ಮಾತ್ರ "ಚಿ:" ಎಂದು ಕನ್ನಡ ಕಾವ್ಯಗಳಲ್ಲಿರುವಂತೆ ಸೂಕ್ಷ್ಮವಾಗಿ ತನ್ನ ತಿರಸ್ಕಾರವನ್ನು ವ್ಯಕ್ತಗೊಳಿಸುವನು.

**ಉಪಸಂಹಾರ:—** ವೇದಕ್ಕೂ ಉಗುಳಿಗೂ ಏನಾದರೂ ಸಂಬಂಧವಿದೆಯೆ? ಎಂದು ಕೆಲವರು (ನನ್ನ ವಿಷಯದ ಮಹತ್ವ

ತಿಳಿಯದೆ ಇದ್ದವರು) ಚೇಷ್ಟೆಯಿಂದ ಕೇಳಬಹುದು· 'ಮಹಾಸ್ವಾಮೀ ಇಲ್ಲದೆ ಇಲ್ಲ' ಎಂದು ನಾನು ಹೇಳುತ್ತೇನೆ. ಆದರೆ ಅದನ್ನು ವರ್ಣಿಸುವ ಶಕ್ತಿಯು ಈ ಪಾಮರನಿಗಿಲ್ಲ. 'ಮಂತ್ರಗಳಿಗಿಂತ ಉಗುಳೇ ಬಹಳ' ಎನ್ನುವ ನಾಸ್ತಿಕರು ಎಂದುಕೊಳ್ಳಲಿ. ವೇದಮಂತ್ರಗಳನ್ನುಚ್ಚರಿಸುವಾಗ ಹಾರುವ ಆ ಬ್ರಹ್ಮಬಿಂದುಗಳ ಮಹಿಮೆಯು ನಕ್ಷತ್ರಗಳಿಗೂ ಬಾರದು. ವೇದಗಳ ಅರ್ಥವನ್ನು ಶರಣರು ದಾಸರು ತಮ್ಮ ವಚನಗಳಲ್ಲಿಯೂ ಕೀರ್ತನೆಗಳಲ್ಲಿಯೂ ಹೇಳಿದರು. ಇಂಥ ಕೀರ್ತನೆಗಳಲ್ಲಿ ಒಂದನ್ನು ಹಾಡುತ್ತ ಪುರಂದರ ದಾಸರು ಓಣಿ ಹಿಡಿದು ಬರುತ್ತಿರುವಾಗ ಭಿಕ್ಷೆ ಹಾಕಬಾರದೆಂಬ ಕ್ಷುದ್ರ ಬುದ್ಧಿಯಿಂದಲೋ ಏನೋ ಒಬ್ಬಳು ಕದವನ್ನು ಮುಚ್ಚಿಕೊಳ್ಳಲು ಅವರು ಉಸುರಿದ್ದೇನಂದರೆ:—

'ಭಾರತ ರಾಮಾಯಣ ಪಂಚರಾತ್ರಾಗಮ ।
ಸಾರತತ್ವದ ಬಿಂದು-ಒಳಗೆ ಬಿದ್ದೀತೆಂದು ।
[redacted]ಯ್ಯಾಳಿಮೂಳೀ ಕದವನಿಕ್ಕಿದಾಳಿದಕೋ '

ಆದಿಕವಿ ವಾಲ್ಮೀಕಿಯು ಕ್ರೌಂಚ ಮಿಥುನದಲ್ಲೊಂದರ ಮರಣ ಕಂಡು ಹಾಡಲಿಲ್ಲವೇ ? ಹಾಗೆ ಇದು. ಹಾಡಿನ ಉಗುಳಿನ ಬಿಂದುವೊಂದು ಸಿಡಿದು ಮನೆಯೇ ಪವಿತ್ರವಾಗಬಹುದಾಗಿತ್ತು. ಗಯ್ಯಾಳಿ ಮೂಳಿ ಕದವನಿಕ್ಕಿಕೊಂಡಳು. ಮಹಾತ್ಮರ ಮಾತಿನುಗುಳು ಸಿಡಿದು ಮನವೇ ಪವಿತ್ರವಾದೀತೆಂದು ಕಿವಿ ಮುಚ್ಚಿಕೊಳ್ಳುವ ಪಂಡಿತರಿಲ್ಲವೇ ಈಗ ! ಮಹಾತ್ಮರು 'ಛಿಃ' ಎಂದು ಉಗುಳಿದರೆ ಸಾಕು—ಆ ಅಹಿಂಸಾಯುಧವೇ ಪೃಥ್ವಿಯನ್ನೆಲ್ಲ ತನ್ನ ತೆಕ್ಕೆಯಲ್ಲಿರಿಸಿಕೊಳ್ಳಬೇಕೆಂಬ ವೃತ್ರಾಸುರನಿಗೆ ಇಂದ್ರನ ವಜ್ರಾಯುಧದಂತಿದೆ.

— ದ. ರಾ. ಬೇಂದ್ರೆ.

——

## ಪರಿಚಯ

ಇದನ್ನು 'ಅಂಬಿಕಾತನಯ ದತ್ತರ' ನಿರಾಭರಣಸುಂದರಿ ಎಂಬ ಗದ್ಯಗ್ರಂಥದಿಂದ ಆಯ್ದುಕೊಂಡಿದೆ. ಅಂಬಿಕಾತನಯ ದತ್ತ (ದ. ರಾ. ಬೇಂದ್ರೆ)ಇವರು ಈಗ ಸೊಲ್ಲಾಪುರದ ಡಿ. ಎ. ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. 'ಗರಿ' 'ನಾದ ಲೀಲೆ' 'ಉಯ್ಯಾಲೆ, ಸಖೀಗೀತ' ಮೊದಲಾದ ಕವನ ಸಂಗ್ರಹ ಗಳನ್ನೂ, ವಿಮರ್ಶಾತ್ಮಕವಾದ ಗದ್ಯ ಲೇಖಗಳನ್ನೂ ಪ್ರಕಟಿಸಿ ದ್ದಾರೆ. ಶ್ರೀ. ದತ್ತರದೃಷ್ಟಿ ಮಿಂಚಿನಂತಹದು ಜೀವನದ ರಹಸ್ಯ ಗಳನ್ನು ಕ್ಷಣಮಾತ್ರದಲ್ಲಿ ಭೇದಿಸಿ ಬೆಳಗಬಲ್ಲದು. ಇವರ 'ಮಾತಿನ ಗಾರುಡಿ' ಎಂಥವರನ್ನೂ ಮರುಳು ಮಾಡಿಬಿಡುತ್ತದೆ. ಈ ಮಾತಿನ ಸತ್ಯತೆಯನ್ನು ಈ ಹರಟೆಯಲ್ಲಿಯೂ ಕಾಣಬಹುದು.

'ನಿರಾಭರಣ ಸುಂದರಿ' ಯೆಂಬ ಗ್ರಂಥದಲ್ಲಿ 'ಹರಟೆ'ಯ ಮಾದರಿಯ ಹಲವು ಪ್ರಬಂಧಗಳೂ ಕವಿತೆಗಳೂ ಉಂಟು ಅವು ಗಳನ್ನು ಓದಿದರೆ ಹೊಟ್ಟೆತುಂಬ ನಗು, ತಲೆತುಂಬ ಬುದ್ಧಿ. ಇವು ಗಳ ಲಾಭವು ಎಲ್ಲರಿಗೂ ಆಗುವದು. ಹರಟೆಗೆ ವಿಷಯವಿಲ್ಲ, ತುದಿ ಮೊದಲಿಲ್ಲ ಆದರೂ ಹರಟೆಯ ಶೈಲಿಯು ರಮ್ಯವಾಗಿಯೂ ಬೋಧಕವಾಗಿಯೂ ಇರುತ್ತದೆ.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

(೧) ಎಲೆ ತಿಂದು ಉಗುಳುವವರನ್ನು ಗ್ರಂಥಕರ್ತರು ಹೇಗೆ ವರ್ಣಿಸಿದ್ದಾರೆ?

(೨) ಹಿರಿಯರ "ಉಗುಳು ದಾಟುತ್ತಿದ್ದಿಲ್ಲ" ವೆಂಬ ಅರ್ಥ ಗರ್ಭಿತ ವಾದ ವಾಕ್ಯದ ವಿಡಂಬನೆಯನ್ನು ಹೇಗೆ ಮಾಡಿದ್ದಾರೆ?

(೩) ಶ್ರೀ ಬೇಂದ್ರೆಯವರು ಮಾನವನ ವ್ಯಾಖ್ಯೆಯನ್ನು ಯಾವ ಯಾವ ರೀತಿಯಲ್ಲಿ ಮಾಡಿದ್ದಾರೆ? ಮತ್ತು ಕೊನೆಗೆ ಸಮಂಜ ಸವಾದ ವ್ಯಾಖ್ಯೆಯನ್ನು ಹೇಗೆ ಹೇಳಿದ್ದಾರೆ?

(೪) ನಾಟಕ ಗೃಹದಲ್ಲಿರುವ "ಉಗುಳಬಾರದು" ಎಂಬ ವಾಕ್ಯದ ವಿನೋದವನ್ನು ಲೇಖಕರಿಗೆ ಯಾವರೀತಿ ಮಾಡಬೇಕೆನಿಸುತ್ತದೆ?

(೫) "ಶಾಯಲಕ್" ನ ಮೋರೆಯ ಮೇಲೆ ಉಗುಳಿದುದೆ ಅಂಟೋನಿಯೋನ ಜೀವಕ್ಕೆ ಮೂಲವಾಯಿತು." ಇದರಲ್ಲಡಕವಾದ ಕತೆಯನ್ನು ೧೫-೨೦ ಸಾಲುಗಳಲ್ಲಿ ವಿಸ್ತರಿಸಿ ಬರೆಯಿರಿ.

(೬) ವೇದಕ್ಕೂ ಉಗುಳಿಗೂ ನಿಜವಾಗಿ ಸಂಬಂಧವಿದೆಯೆ? ಆ ಸಂಬಂಧವನ್ನು ಶ್ರೀ ಬೇಂದ್ರೆಯವರು ಹೇಗೆ ಹಚ್ಚಿ ತೋರಿಸಿದ್ದಾರೆ?

(೭) ನಿಮಗೆ ಹುಚ್ಚಾಗಿ ನಗಿಸಿದ ಒಂದೆರಡು ಸಂದರ್ಭಗಳನ್ನು ಸೂಚಿಸಿರಿ.

(೮) ಉಗುಳುವ ಪ್ರಕಾರಗಳೆಷ್ಟು?

(೯) 'ಉಗುಳು' ಈ ಶಬ್ದವನ್ನೊಳಗೊಂಡ ಬೇರೆ ಬೇರೆ ಪದ ಹೇಳಿ ಅವುಗಳ ಅರ್ಥವನ್ನು ಬರೆಯಿರಿ.

(೧೦) ಶ್ರೀರಂಗರ "ಸ್ವಲ್ಪ ಲಕ್ಷ್ಯ ಸ್ವಾರಸ್ಯ"ವೆಂಬ ಹರಟೆ ಸಂಗ್ರಹವನ್ನು ಓದಿರಿ.

(೧೧) "ನಗುವುದು" ಎಂಬ ವಿಷಯದ ಮೇಲೆ ಒಂದು ಹರಟೆಯನ್ನು ಬರೆಯಿರಿ.

**ಸ್ಪಷ್ಟೀಕರಿಸಿರಿ:—**

(೧) ನಮ್ಮ ನಮ್ಮ ನಾಲಿಗೆ ನಮ್ಮ ಬಾಯೊಳಗಿದ್ದರೂ ನಮ್ಮ ನಮ್ಮ ಕೈಯಲ್ಲಿವೆಯೇ?

(೨) ಉಗುಳುವಂಥ ತೀವ್ರ ನಿಷೇಧವು ಬೇರೆ ಯಾವುದೂ ಇಲ್ಲ.

**ವ್ಯಾಕರಣ: —**

**ಕೆಳಗಿನ ಮಾತುಗಳ ಅರ್ಥವನ್ನೇ ಹೇಳುವ ಒಂದೊಂದೇ ಶಬ್ದವನ್ನು ಹೇಳಿರಿ:—**

(೧) ಒಳಗಿರುವ ಆಹಾರ ಪದಾರ್ಥಗಳು ಮುಗಿದು ಎಂದೂ ಬರಿದಾಗದ ಪಾತ್ರೆ.

(೨) ಕೆಲಸವಿಲ್ಲದೆ ತಿರುಗುವವ.

(೩) ಚಿಕ್ಕ ಕರುವುಳ್ಳ ದನ.

(೪) ಆನೆ ಹಿಡಿಯುವ ಕುಳಿ.

(೫) ಐವತ್ತು ಎಲೆಗಳ ಕಟ್ಟು.

# ೧೩. ವಾಙ್ಮಯ ವೈಭವ

ನೃಪತುಂಗನ ಕಾಲದಿಂದಲೂ ಕನ್ನಡದೊಳಗೆ ಹಳಗನ್ನಡ-ಹೊಸಗನ್ನಡವೆಂಬ ಭೇದವು ಇರುವದಂತೂ ಸರಿಯಷ್ಟೇ! ಈ ಕಾಲಕ್ಕೆ ಕನ್ನಡ ಭಾಷೆಯು ಯಾವದೇ ಒಂದು ಹಳೆಯ ಅವಸ್ಥೆಯಿಂದ ಹೊಸದಾದ ಅವಸ್ಥೆಗೆ ಹೆಜ್ಜೆಯಿಕ್ಕಿತೆಂದು ಊಹಿಸಲಿಕ್ಕೆ ಅವಕಾಶವಾಗಿದೆ. ಹಳೆಗನ್ನಡವು ಹೋಗಿ ಹೊಸಗನ್ನಡವು ಹುಟ್ಟುವದಕ್ಕೆ ಮುಂಚೆ ೭—೮ ಶತಮಾನಗಳು ಕಳೆದು ಹೋಗಿರಬೇಕು. ಸಾರಾಂಶ— ಕನ್ನಡ ಭಾಷೆಯು ೬ನೆಯ ಶತಮಾನದಲ್ಲಿ ಒಳ್ಳೇ ಘನತೆಗೇರಿತ್ತೆಂದು ಹೇಳಬಹುದು. ಮುಂದೆ ೩ ರಿಂದ ೫ನೆಯ ಶತಮಾನಗಳಲ್ಲಿ ಗಂಗ ಅರಸರ ಆಳಿಕೆಯಲ್ಲಿಯೂ, ಕದಂಬ ಅರಸರ ಕಾಲದಲ್ಲಿಯೂ ಬಾಳಿದ ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ದುರ್ವಿನೀತ ಮುಂತಾದ ಮಹಾ ಮಹಾ ಪ್ರಾಸಾದಿಕ ಕವಿಗಳ ಗ್ರಂಥಗಳಿಂದಲೂ ಇದೇ ವ್ಯಕ್ತವಾಗುತ್ತದೆ.

ಚಾಲುಕ್ಯರ ಆಳಿಕೆಯಲ್ಲಿಯೂ ಕನ್ನಡ ನುಡಿಯ ಅಭಿವೃದ್ಧಿಯ ಲಕ್ಷಣಗಳು ದೃಗ್ಗೋಚರವಾಗುತ್ತವೆ ಇವರ ಕಾಲಕ್ಕೆ ಶ್ರೀವರ್ಧದೇವ, ವಿಮಲ, ಉದಯ, ನಾಗಾರ್ಜುನ ಮುಂತಾದ ಕವೀಶ್ವರರು ಜನಿಸಿದರು. ಹಾನಗಲ್ಲ ತಾಲೂಕ ಅಡೂರಿನಲ್ಲಿಯ ಶಿಲಾಲಿಪಿಯು ಕನ್ನಡ ಅಕ್ಷರಗಳು ಅತಿಶಯ ಪ್ರಾಚೀನವಾದುವು. ಅದು ಸುಮಾರು ೫೬೫ನೆಯ ಇಸ್ವಿಯ ಶಿಲಾಲಿಪಿಯು.

ರಾಷ್ಟ್ರಕೂಟರ ಕಾಲಕ್ಕಂತೂ ಕನ್ನಡ ನುಡಿಗೆ ಮತ್ತಿಷ್ಟು ಹೆಚ್ಚಿನ ಪ್ರಾಶಸ್ತ್ಯವು ಪ್ರಾಪ್ತವಾಯಿತು. ರಾಷ್ಟ್ರಕೂಟರ ಅರಸನಾದ ನೃಪತುಂಗನು ಸ್ವತಃ ವಾಙ್ಮಯ ಪ್ರಭುವಾಗಿದ್ದನಲ್ಲದೆ ಕನ್ನಡಕ್ಕೆ ಒಳ್ಳೇ ಆಶ್ರಯನಾಗಿದ್ದನು. ಇವನು ಬರೆದ 'ಕವಿರಾಜಮಾರ್ಗ' ವೆಂಬ ಅಲಂಕಾರ ಗ್ರಂಥವು ಈಗ ಉಪಲಬ್ಧವಿರುವ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದುದು.(೯ನೆಯ ಶತಮಾನ)—ಈ ನೃಪತುಂಗನು ಸಂಸ್ಕೃತದಲ್ಲಿಯೂ 'ಪ್ರಶ್ನೋತ್ತರಮಾಲಾ' ಎಂಬ ಗ್ರಂಥವನ್ನು ರಚಿಸಿರುವನು. ಈ ಗ್ರಂಥವು ತಿಬೇಟ ಭಾಷೆಯಲ್ಲಿ ಪರಿವರ್ತಿತವಾಗಿರುವ ಸಂಗತಿಯನ್ನು 'ಸಫಸ್' ಎಂಬವರು ಗೊತ್ತು ಹಿಡಿದಿದ್ದಾರೆ. ಕನ್ನಡ ನಾಡು, ಕನ್ನಡಿಗರು, ಕನ್ನಡ ಭಾಷೆ ಇವುಗಳ ಬಗ್ಗೆ ನೃಪತುಂಗನಲ್ಲಿರುವ ಆದರಾತಿಶಯವು ಅವನ ಗ್ರಂಥದಿಂದ ಚೆನ್ನಾಗಿ ತೋರ್ಪಡುತ್ತದೆ. ಇವನ ಕಾಲದಲ್ಲಿದ್ದ ಬಂಕೇಶನೆಂಬ ಸೇನಾಪತಿಯ ಹೆಂಡತಿ "ವಿಜಯಾ" ಎಂಬವಳು ಒಂದು ಸಂಸ್ಕೃತ ಕಾವ್ಯವನ್ನು ಬರೆದಿರುವುದಾಗಿ ತಿಳಿಯುತ್ತದೆ. ಅದರೊಳಗಿನ ಒಂದು ಶ್ಲೋಕವನ್ನು ಇಲ್ಲಿ ಉದ್ಧರಿಸುವೆವು.

ಸರಸ್ವತೀವ ಕರ್ಣಾಟೀ ವಿಜಯಾಂಕಾ ಜಯತ್ಯಸೌ ।
ಯಾ ವೈದರ್ಭಗಿರಾಂ ವಾಸಃ ಕಾಲಿದಾಸಾದನಂತರಮ್ ॥

"ಕಾಳಿದಾಸನ ತರುವಾಯ ವೈದರ್ಭ ಶೈಲಿಗೆ ಆಶ್ರಯ ಕೊಟ್ಟ, ವಿಜಯಾ ಎಂಬ ಬಿರುದುಳ್ಳ ಕರ್ಣಾಟಿಯು ಪ್ರತಿ ಸರಸ್ವತಿಯಂತೆ ಮೆರೆಯುತ್ತಿರುವಳು." ಅಕಲಂಕ, ಗುಣನಂದಿ, ಪೊನ್ನ ಮೊದಲಾದ ಕವಿಗಳು ಈತನ ಆಳಿಕೆಯಲ್ಲಿಯೇ ಬೆಳಕಿಗೆ ಬಂದರು. ಹಲಾಯುಧನು ರಚಿಸಿದ ಕವಿರಹಸ್ಯ ಎಂಬ ಗ್ರಂಥಕ್ಕೆ ರಾಷ್ಟ್ರಕೂಟದ ಅರಸನಾದ ಕೃಷ್ಣನೇ ನಾಯಕನಾಗಿದ್ದಾನೆ. ಪ್ರಸಿದ್ಧ ಜೈನ ಕವಿಗಳಾದ ಜಿನಸೇನ ಮತ್ತು ಗುಣಭದ್ರ ಇವರೀರ್ವರೂ ರಾಷ್ಟ್ರಕೂಟರ ಆಸ್ಥಾನ ಪಂಡಿತರಾಗಿದ್ದರು.

ಹೊಸ ಚಾಲುಕ್ಯರ ಆಡಳಿತದಲ್ಲಿ ಕನ್ನಡ ಭಾಷೆಯು ಮತ್ತಿಷ್ಟು ಹೆಚ್ಚು ಪ್ರಗಲ್ಭ ಸ್ಥಿತಿಗೆ ಬಂದಿತು. ಇವರ ಕಾಲಕ್ಕೆ ಕರ್ನಾಟಕದ ರಾಜ್ಯವಿಸ್ತಾರವು ಪರಮಾವಧಿಯನ್ನು ಹೊಂದಿದಂತೆ ಭಾಷೆಯೂ ಪರಿಣತಾವಸ್ಥೆಯನ್ನು ಹೊಂದಿತು. ಕರ್ನಾಟಕದ ಮಹಾ ಮಹಾ ಕವಿಗಳೆಲ್ಲರೂ ಸಾಧಾರಣವಾಗಿ ಇವರ ಆಳಿಕೆಯಲ್ಲಿಯೇ ಹೆಸರಿಗೆ ಬಂದರು. ರಾಷ್ಟ್ರಕೂಟರ ಅಂತ್ಯಕಾಲಕ್ಕೆ ಎಂದರೆ ಚಾಲುಕ್ಯರ ಆಳಿಕೆಯ ಆರಂಭಕ್ಕೆ ಉತ್ತರ ಹಿಂದುಸ್ತಾನದಲ್ಲಿ ಬಲಾಢ್ಯರಾದ ಅರಸರಿರಲಿಲ್ಲ. ಹೀಗಿರುವದರಿಂದ ಪ್ರಖ್ಯಾತ ಕವಿಯಾದ ಬಿಲ್ಹಣನು ಆಶ್ರಯಕ್ಕಾಗಿ ಅಲೆಯುತ್ತ ಅಲೆಯುತ್ತ ಹಿಂದುಸ್ತಾನವನ್ನೆಲ್ಲ ಸುತ್ತಿ, ಕೊನೆಗೆ ದಕ್ಷಿಣದಲ್ಲಿ ಆಳುತ್ತಿರುವ ಚಾಲುಕ್ಯವಿಕ್ರಮನ ಆಸ್ಥಾನಕ್ಕೆ ಬಂದು ಅಲ್ಲಿ ನಿಂತನು. ಅವನಿಗೆ 'ವಿದ್ಯಾಪತಿ' ಎಂದು ಬಿರುದುಂಟು ಧರ್ಮಶಾಸ್ತ್ರಕಾರನಾದ ವಿಜ್ಞಾನೇಶ್ವರನೂ ಈತನ ಹತ್ತರವೇ ಇದ್ದನು; ಅವನು 'ಮಿತಾಕ್ಷರಾ' ಎಂಬ ಪ್ರಸಿದ್ಧ ಧರ್ಮಶಾಸ್ತ್ರ ಗ್ರಂಥವನ್ನು ಬರೆದಿರುವನು ಅದು ಮುಂಬಯಿ ಇಲಾಖೆಯ ಕೋರ್ಟುಗಳಲ್ಲಿಯೂ ಹಿಂದುಸ್ತಾನದ ಮಿಕ್ಕ ಅನೇಕ ಭಾಗಗಳಲ್ಲಿಯೂ ಹಿಂದು ಧರ್ಮಕ್ಕೆ ಪ್ರಮಾಣ ಗ್ರಂಥವಾಗಿದೆ. ಕನ್ನಡ ಭಾಷೆಯ ಕವಿಗಳಲ್ಲಿ ಆದಿಪಂಪ, ರನ್ನ, ಚಂದ್ರರಾಜ, ದುರ್ಗಸಿಂಹ, ಕೀರ್ತಿವರ್ಮ, ನಾಗವರ್ಮ ಇವರೇ ಪ್ರಮುಖರು. ಆಗಿನ ಕಾಲಕ್ಕೆ ಅರಸರು ಕನ್ನಡ ಕವಿಗಳನ್ನು ನಾನಾಬಗೆಯಿಂದ ಬಹುಮಾನಿಸುತ್ತಿದ್ದರು. ಕನ್ನಡ ಕವಿತ್ರಯರಲ್ಲಿ (ಹೊನ್ನ, ರನ್ನ, ಆದಿಪಂಪ) ಒಬ್ಬನಾದ ರನ್ನನಿಗೆ ತೈಲಪನು ಛತ್ರಚಾಮರಾದಿ ರಾಜಚಿಹ್ನಗಳನ್ನು ಸಲ್ಲಿಸಿ ಮನ್ನಣೆ ಮಾಡಿದನು. ಚಾಲುಕ್ಯ ವಿಕ್ರಮನ ಮಗನಾದ ೩ನೆಯ ಸೋಮೇಶ್ವರನು 'ಮಾನಸೋಲ್ಲಾಸ'ವೆಂಬ ಸಂಸ್ಕೃತ ಗ್ರಂಥವನ್ನು ರಚಿಸಿದನು. ಇದರಿಂದ ಅನೇಕ ರಾಜಕೀಯ ಸಂಗತಿಗಳು ತಿಳಿಯುವಂತಿವೆ. ಇದರಲ್ಲಿ ರಾಜ್ಯ ಸಂಪಾದಿಸುವ ಬಗೆ, ರಾಜವಿಲಾಸ

ವರ್ಣನೆ ಮುಂತಾದ ವಿಷಯಗಳಿವೆ. ಅರಸರು, ರಾಜನೀತಿ, ಜ್ಯೋತಿಷ್ಯ, ಫಲಜ್ಯೋತಿಷ್ಯ, ಭಾಷಾಶಾಸ್ತ್ರ, ಅಲಂಕಾರಶಾಸ್ತ್ರ, ಕಾವ್ಯ, ಸಂಗೀತ, ಚಿತ್ರಕಲೆ, ಶಿಲ್ಪಕಲೆ, ಅಶ್ವವಿದ್ಯೆ ಮುಂತಾದ ವುಗಳಲ್ಲಿ ನಿಷ್ಣಾತರಾಗಿರಬೇಕೆಂದು ಇದರಲ್ಲಿ ಹೇಳಿದೆ. ಈ ಅರಸನು ವಿದ್ಯಾವಂತನಾದುದರಿಂದ ಅವನಿಗೆ 'ಸರ್ವಜ್ಞಭೂಪ'ನೆಂದು ಹೆಸರಿತ್ತು.

ಹೊಯ್ಸಳ ಅರಸರ ರಾಜ್ಯಕಾರಭಾರದಲ್ಲಿಯೂ ಅಭಿನವ ಪಂಪ, ಕಂತಿ, ರಾಜಾದಿತ್ಯ, ಸುಮನೋಬಾಣ, ಮಲ್ಲಿಕಾರ್ಜುನ, ರುದ್ರಭಟ್ಟ, ಜನ್ನ, ಕೇಶಿರಾಜ, ಇತ್ಯಾದಿ ರತ್ನಗಳು ಕರ್ನಾಟಕಕ್ಕೆ ಲಭಿಸಿದುವು ವಿಜಯನಗರದ ಕಾಲಕ್ಕೆ ವೇದಾಂತ, ನ್ಯಾಯ, ಮೀಮಾಂಸಾ, ಆಯುರ್ವೇದ, ನೀತಿ, ಯುದ್ಧಕಲೆ, ರಸಾಯನ' ಇಂಥ ಅನೇಕ ಬಗೆಯ ಶಾಸ್ತ್ರಗಳಿಗೂ, ವೇದಗಳಿಗೂ ವ್ಯಾಖ್ಯಾನ ಬರೆಯುವಂಥ ವಿದ್ಯಾರಣ್ಯರು ಜನ್ಮವೆತ್ತಿದರು ಈ ಕಾಲಕ್ಕೆ ಬಾಳಿದ ಕನ್ನಡ ಕವಿಗಳು ಮಧುರ, ಮಂಗರಸ, ಗದುಗಿನ ಕುಮಾರವ್ಯಾಸ, ನಿತ್ಯಾತ್ಮಶುಕ, ಲಕ್ಕಣ್ಣದಂಡೇಶ ಇವರಲ್ಲದೆ ಪುರಂದರದಾಸ ವ್ಯಾಸರಾಯರಂಥ ಧಾರ್ಮಿಕ ಸತ್ಪುರುಷರು ಉದಯಿಸಿದರು ಕೃಷ್ಣರಾಯನ ಆಸ್ಥಾನವಂತೂ ಅಷ್ಟದಿಗ್ಗಜಗಳಿಂದ ಶೋಭಿಸುತ್ತಿತ್ತು. ಕರ್ನಾಟಕ ಕವಿಗಳನೇಕರು ಸಂಸ್ಕೃತ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿಯೂ ಪಂಡಿತರಾದುದರಿಂದ ಅವರಿಗೆ 'ಉಭಯಕವಿಚಕ್ರವರ್ತಿ' ಎಂದು ಬಿರುದಿತ್ತು.

ಅನೇಕ ಅರಸರು ಸ್ವತಃ ಕನ್ನಡ ಕವಿಗಳಾಗಿದ್ದರು. ೩ನೆಯ ಶತಮಾನದಲ್ಲಿ ಗಂಗ ಅರಸನಾದ ೨ನೆಯ ಮಾಧವನು "ದತ್ತಕ ಸೂತ್ರವೃತ್ತಿ" ಎಂಬ ಗ್ರಂಥವನ್ನು ಬರೆದನು. ೫ನೆಯ ಶತಮಾನದಲ್ಲಿ ದುರ್ವಿನೀತನೆಂಬ ಗಂಗ ಅರಸನು ಶಬ್ದಾವತಾರವನ್ನೂ, ಪೈಶಾಚ ಭಾಷೆಯಲ್ಲಿದ್ದ ಬೃಹತ್ಕಥೆಗೆ ಸಂಸ್ಕೃತ ಪರಿವ

ರ್ತನವನ್ನೂ, ಭಾರವಿಯ ಕಿರಾತಾರ್ಜುನಕ್ಕೆ ಕನ್ನಡ ಟೀಕೆಯನ್ನೂ ಬರೆದನು ಅಲ್ಲದೆ ಕನ್ನಡದಲ್ಲಿ ಒಂದು ಗದ್ಯಗ್ರಂಥವನ್ನೂ ಬರೆದಂತೆ ತಿಳಿಯುತ್ತದೆ. ಆದರೆ ಇದು ಉಪಲಬ್ಧವಿಲ್ಲ. ೮ನೆಯ ಶತಮಾನದಲ್ಲಿ ಗಂಗರಸನಾದ ಶ್ರೀಪುರುಷನೆಂಬವನು "ಗಜಶಾಸ್ತ್ರ"ವೆಂಬ ಗ್ರಂಥವನ್ನು ರಚಿಸಿದ್ದನಂತೆ! ಅವನ ಮಗನಾದ ಶಿವಮಾರನೆಂಬವನು "ರಾಜಾಷ್ಟಕ"ವೆಂಬ ಗ್ರಂಥವನ್ನು ರಚಿಸಿದನು. *ಇವನು ನಾಟಕಾದಿಗಳಲ್ಲಿ ಪ್ರಮಾಣಪ್ರವೀಣನೆಂದೆನಿಸಿಕೊಂಡಿರುವನು. ಅಲ್ಲದೆ ಆನೆ ಕುದುರೆಗಳನ್ನು ಶಿಕ್ಷಿಸುವದರಲ್ಲಿಯೂ ಇವನ ಗ್ರಂಥವನ್ನೇ ಪ್ರಮಾಣವಾಗಿ ಹಿಡಿಯುತ್ತಿದ್ದರಂತೆ!

ನಮ್ಮ ಕರ್ನಾಟಕ ಹೆಂಗಸರು ವಾಙ್ಮಯಕ್ಕೆ ಮಾಡಿದ ಸೇವೆಯು ಮಿಕ್ಕ ಯಾರಿಗಿಂತಲೂ ಕಡಿಮೆಯಾಗಿರುವುದಿಲ್ಲ. ಕಂತಿ, ಹೊನ್ನಮ್ಮ ಮುಂತಾದ ಕವಯಿತ್ರಿಯರು ಕನ್ನಡಿಗರಿಗೆ ಗೊತ್ತೇ ಇರುವುದರಿಂದ ಅವರ ಹೆಸರನ್ನು ಇಲ್ಲಿ ಪುನಃ ಹೇಳುವದಿಲ್ಲ. ಆದರೆ ಕರ್ನಾಟ ರಾಜಪ್ರಿಯಾ, ಕರ್ಣಾಟೀ, ನಾಗಮ್ಮ, ವಿಜ್ಜಕಾ ಮುಂತಾದ ಹೆಂಗಸರು ಸಂಸ್ಕೃತ ಕವಯಿತ್ರಿಯರಾಗಿದ್ದರು. ಮೊನ್ನೆ ಮೊನ್ನೆ ಜಗತ್ತಿಗೆ ಗೊತ್ತಾದ ವಿಜಯನಗರದ ಬುಕ್ಕಮಹಾರಾಯನ ಹಿರಿಯ ಸೊಸೆಯಾದ ಗಂಗಾದೇವಿಯೆಂಬವಳೂ ಅತಿಶಯ ಪ್ರತಿಭಾಸಂಪನ್ನಳಾದ ಸಂಸ್ಕೃತ ಕವಯಿತ್ರಿಯಾಗಿದ್ದಳೆಂದು ಹೇಳಿದರೆ ಯಾವ ಕನ್ನಡಿಗನಿಗ ಆನಂದವಾಗಲಿಕ್ಕಿಲ್ಲ! ಇವಳು ತನ್ನ ಗಂಡನಾದ ಕಂಪಣನು ಮಧುರೆಯಮೇಲೆ ದಂಡೆತ್ತಿ ಹೋದ ಸಂಗತಿಯನ್ನು "ಮಧುರಾ ವಿಜಯಂ ಅಥವಾ ವೀರಕಂಪಣರಾಯ ಚರಿತಂ" ಎಂಬ ಪ್ರೌಢಶೈಲಿಯಿಂದ ಯುಕ್ತವಾದ ಕಾವ್ಯದಲ್ಲಿ ವರ್ಣಿಸಿರುವಳು.

ಸಾರಾಂಶ, ಸಂಸ್ಕೃತ ಕನ್ನಡ ವಾಙ್ಮಯಕ್ಕೆ ನಮ್ಮ ಕರ್ನಾಟಕಸ್ಥರು ಮಾಡಿದ ಸೇವೆಯು ಅಷ್ಟಿಷ್ಟೆಂದು ಹೇಳಲಳವಲ್ಲ.

ಈ ಮೇರೆಗೆ ನಾವು ವಾಙ್ಮಯ ವೈಭವವನ್ನು ಸಂಕ್ಷೇಪವಾಗಿ ವರ್ಣಿಸಿರುವೆವು. ಮೊದಲು ಮೊದಲು ಸಂಸ್ಕೃತದ ಪ್ರಾಬಲ್ಯವಿದ್ದುದರಿಂದ ಕನ್ನಡ ವಾಙ್ಮಯವು ಅದರೊಡನೆ ಕಾದಬೇಕಾಯಿತು. ಬ್ರಾಹ್ಮಣರ ಗ್ರಂಥಗಳೆಲ್ಲವೂ ಅನೇಕ ನೂರು ವರ್ಷಗಳ ವರೆಗೆ ಸಂಸ್ಕೃತದಲ್ಲಿಯೇ ಇದ್ದವು. ಆದರೆ ಬೌದ್ಧ, ಜೈನ ಧರ್ಮಗಳು ವೈದಿಕ ಧರ್ಮದಿಂದ ಸಿಡಿದು ನಿಂತುದರಿಂದ, ವೈದಿಕ ಧರ್ಮದ ಮುಖ್ಯ ಭಾಷೆಯಾದ ಸಂಸ್ಕೃತದಲ್ಲಿ ಅವರು ಗ್ರಂಥಗಳನ್ನು ಬರೆಯದೆ ದೇಶಭಾಷೆಯಲ್ಲಿ ಬರೆಯತೊಡಗಿದರು. ಮುಂದೆ ಬರಬರುತ್ತ ವೈದಿಕ ಧರ್ಮದಲ್ಲಿ ಸುಧಾರಕರಾಗಿ ಉದ್ಭವಿಸಿದ ವೀರಶೈವ ಧರ್ಮದವರೂ ಜೈನ ಬೌದ್ಧರನ್ನೇ ಅನುಕರಣಮಾಡಿದರು. ಆದರೆ ಮುಂದೆ ಬ್ರಾಹ್ಮಣರೂ ಕೆಲವಂಶದಿಂದ ಈ ದೇಶಭಾಷೆಯ ಪ್ರಾಬಲ್ಯ ಪ್ರವಾಹದ ಸೆಳವಿಗೆ ಸಿಲ್ಕಿ ಹರಿದುಬಂದರು. ಅವರೂ ತಮ್ಮ ಧರ್ಮವಿಷಯಗಳನ್ನು ಕೂಡ ಪ್ರಾಕೃತದಲ್ಲಿ ಬರೆಯತೊಡಗಿದರೆಂಬುದು ಶ್ರೀ ಪುರಂದರದಾಸ ಮುಂತಾದವರ ಆಚರಣೆಯಿಂದ ಗೊತ್ತಾಗುತ್ತದೆ. ಈ ಮೇರೆಗೆ ಕನ್ನಡ ವಾಙ್ಮಯವು ಸಂಸ್ಕೃತದೊಡನೆ ಮಾಡಿದ ಯುದ್ಧದ ಕಥೆಯು ಮನೋರಂಜಕವಾಗಿದೆ. ಆದರೆ ಅದನ್ನು ಇಲ್ಲಿ ದಿಗ್ದರ್ಶನ ಮಾಡುವುದಕ್ಕಿಂತ ಹೆಚ್ಚಿಗೆ ಹೇಳುವುದಕ್ಕೆ ಅವಕಾಶವಿಲ್ಲ. ಇಷ್ಟಾದರೂ ಇದು ಪ್ರೇಮ ಯುದ್ಧವೇ ಆಗಿತ್ತು. ಏಕೆಂದರೆ ಸಂಸ್ಕೃತ ಭಾಷೆಯ ವಿಷಯಕ್ಕಿರುವ ಆದರವು ಅದರಿಂದ ತಿಲಪ್ರಾಯವೂ ಕಡಿಮೆಯಾಗಲಿಲ್ಲ. ಇಷ್ಟೇಅಲ್ಲ, ಅನೇಕ ಜೈನ ಬೌದ್ಧ ವೀರಶೈವ ಧರ್ಮದವರೂ ಸಂಸ್ಕೃತದಲ್ಲಿ ಗ್ರಂಥಗಳನ್ನು ರಚಿಸಿದರು.

— ಶ್ರೀ ಆಲೂರ ವೆಂಕಟರಾಯರು.

# ಪರಿಚಯ.

ಕರ್ನಾಟಕದ ಕುಲಪುರೋಹಿತರೆನಿಸಿರುವ ಶ್ರೀ ಆಲೂರ ವೆಂಕಟರಾಯರನ್ನು ಅರಿಯದ ಕನ್ನಡಿಗರೇ ಇಲ್ಲವೆನ್ನಬಹುದು. ಷಷ್ಠ್ಯಬ್ದಪೂರ್ತಿಯನ್ನು ಕಂಡ ಕನ್ನಡದ ವೃದ್ಧ ತಪಸ್ವಿಗಳಲ್ಲೊಬ್ಬ ರಾದ ಇವರು ಧಾರವಾಡದವರು. ಉತ್ತರ ಕರ್ನಾಟಕದಲ್ಲಿ ನಾಲ್ವತ್ತು ವರುಷಗಳ ಹಿಂದೆಯೇ ಹೊಸಗನ್ನಡ ಸಾಹಿತ್ಯದ ಆದ್ಯಪ್ರವರ್ತಕ ರೆಂದರೂ ತಪ್ಪಾಗದು. ಧಾರವಾಡವು ಇವರ ವ್ಯಕ್ತಿತ್ವದಿಂದ ಕನ್ನಡದ ಹಿರಿತನವನ್ನು ಕಂಡಿತು. ನಿಷ್ಠಾವಂತ ಕಾಂಗ್ರೆಸ್ಸಿಗ ರಾಗಿ ವಕೀಲಿ ವೃತ್ತಿಗೆ ಶರಣು ಹೊಡೆದ ಮೇಲೆ ತಿರುಗಿ ಪ್ರಾರಂ ಭಿಸಲೇ ಇಲ್ಲ; ಕನ್ನಡ ಸಾಹಿತ್ಯ ಪರಿಷತ್ತು, ವಿದ್ಯಾವರ್ಧಕ ಸಂಘ ಮೊದಲಾದ ಸಂಸ್ಥೆಗಳ ಸಂಘಟನೆಯಲ್ಲಿ ಮನವಿಟ್ಟು ದುಡಿದವರು. 'ಗತವೈಭವ'ವನ್ನು ಬರೆದು ಕನ್ನಡಿಗರ ಕಣ್ಣು ತೆರೆದರು. 'ಜಯ ಕರ್ನಾಟಕ'ವನ್ನು ಪ್ರಾರಂಭಿಸಿ ಕನ್ನಡದ ಬೆಳೆಯು ಹುಲುಸಾಗಿ ಬರುವಂತೆ ಮಾಡಿ ಕಾಲಕ್ರಮದಲ್ಲಿ 'ಗೆಳೆಯರ ಗುಂಪಿ'ಗೆ ಒಪ್ಪಿ ಸಿದರು. 'ನವಜೀವನ ಗ್ರಂಥಮಾಲೆ'ಯಿಂದ ವಿಚಾರ ಪ್ರಚೋ ದಕ ಸಾಹಿತ್ಯವನ್ನು ಬೆಳಕಿಗೆ ತಂದರು. ಹೀಗೆ ಇವರ ಸಾಹಿತ್ಯ ಸೇವೆ ನಾನಾಮುಖವಾದುದು. ಇವರ ಕನ್ನಡದ ಪ್ರೇಮ ಸರ್ವ ವ್ಯಾಪಿಯಾದುದು. ಮುದವೀಡು ಕೃಷ್ಣರಾಯರ ಭಾಷಣ ತೇಜಸ್ವಿ ಯಾದಂತೆ, ಇವರ ಲೇಖನ ಓಜಸ್ವಿಯಾದುದು. ಇವರು ಬರೆದ 'ಜೀವನ ಸ್ಮೃತಿಗಳು' ಎಂಬುದು ಕನ್ನಡದಲ್ಲಿ ಆತ್ಮಚರಿತ್ರೆಯ ಹೊಸದಾರಿ.

ಇಲ್ಲಿ ಆಯ್ದುಕೊಂಡ ಭಾಗವು "ಗತ ವೈಭವ" ದಲ್ಲಿಯ 'ವಾಙ್ಮಯ ವೈಭವ' ಎಂಬ ಪ್ರಕರಣದೊಳಗಿನದು.

**ಟಿಪ್ಪಣಿ:—**

ಪ್ರಾಸಾದಿಕ ಕವಿ, ವರಕವಿ; ಉಪಲಬ್ಧವಿರುವ, ದೊರೆತ; ಪ್ರಗಲ್ಭಸ್ಥಿತಿ, ಏರಿಕೆ;

(೧) ಗಂಗರಸರು:— ಇವರು ಕ್ರಿ. ಶ. ಸುಮಾರು ೩ನೆಯ ಶತಮಾನದಿಂದ ೧೧ನೆಯ ಶತಮಾನದ ವರೆಗೆ ಕರ್ನಾಟಕದಲ್ಲಿ ಆಳಿದರು ಕುವಳಾಲಪುರವೇ (ಕೋಲಾರ) ಅವರ ರಾಜಧಾನಿ. ಮಾಧವನೆಂಬುವನು ಗಂಗವಾಡಿಯ ರಾಜ್ಯವನ್ನು ಸ್ಥಾಪಿಸಿದನು.

(೨) ಕದಂಬರು:— ಕ್ರಿ. ಶ ೨ ರಿಂದ ೬ರ ವರೆಗೆ ಆಳಿದರು. ಬನವಸೆಯೇ ಅವರ ರಾಜಧಾನಿಯಾಗಿತ್ತು. ಜಯಂತನು ಈ ಅರಸು ಮನೆತನದ ಮೊದಲಿಗನು.

(೩) ಚಾಲುಕ್ಯರು:- ಚಾಳುಕ್ಯರಿಗೆ ಬಾದಾಮಿಯ ಚಾಳುಕ್ಯರೆಂದೂ ಹೆಸರು. ಬಾದಾಮಿಯು (ವಾತಾಪಿ) ಅವರ ರಾಜಧಾನಿ. ಜಯಸಿಂಹನು ಚಾಳುಕ್ಯ ರಾಜ್ಯಸ್ಥಾಪಕನು. ಇವರು ಎರಡು ಶತಮಾನಗಳ ವರೆಗೆ ರಾಜ್ಯವಾಳಿದರು.

(೪) ರಾಷ್ಟ್ರಕೂಟರು:— ಇವರಾಳುತ್ತಿದ್ದ ದೇಶಕ್ಕೆ 'ರಟ್ಟವಾಡ'ವೆಂದೂ, ಈ ಅರಸರಿಗೆ ರೂಢಿಯಾಗಿ 'ವಲ್ಲಭ'ರೆಂದೂ ಹೆಸರಿತ್ತು. ಇವರ ಮೊದಲಿನ ರಾಜಧಾನಿಯು ನಾಸಿಕ ಜಿಲ್ಹೆಯೊಳಗಿನ ಮಯೂರಖಿಂಡಿ ೯ನೆಯ ಶತಮಾನದಿಂದ ನಿಜಾಮು ಸರಕಾರದೊಳಗಿರುವ ಮಾನ್ಯಖೇಟವೇ ಇವರ ರಾಜಧಾನಿಯಾಯಿತು. ಇವರು ಕ್ರಿ ಶ ಸು. ೪ನೆಯ ಶತಮಾನದಿಂದ ೬ನೆಯ ಶತಮಾನದ ವರಗೆ ಆಳಿದರು

(೫) ಹೊಯ್ಸಳರು:— ಇವರು ಕ್ರಿ ಶ. ೧೧ನೆಯ ಶತಮಾನದಿಂದ ೧೪ನೆಯ ಶತಮಾನದ ಮಧ್ಯಕಾಲದವರೆಗೂ ಆಳಿದರು. ಕರ್ನಾಟಕ ದೇಶದಲ್ಲಿ ದ್ವಾರಸಮುದ್ರವೂ, ದ್ರಾವಿಡ ದೇಶದಲ್ಲಿ ವಿಕ್ರಮಪುರಿಯೂ ಇವರ ರಾಜಧಾನಿಗಳಾಗಿದ್ದವು. ಮೊದಲಿನಿಂದಲೂ ಇವರು ಚಾಲುಕ್ಯರಿಗೆ ಸಾಮಂತರಾಗಿದ್ದರು; ವಿಷ್ಣುವರ್ಧನನ ಕಾಲದಲ್ಲಿ ಹೊಯ್ಸಳರು ಸಂಪೂರ್ಣ ಸ್ವತಂತ್ರರಾದರು,

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ:—**

(೧) ಕರ್ನಾಟಕವನ್ನಾಳಿದ ಮುಖ್ಯ ಅರಸುಮನೆತನಗಳಾವವು ? ಪ್ರತಿಯೊಂದರಲ್ಲಿ ಹೆಸರುವಾಸಿಯಾದ ಒಬ್ಬಿಬ್ಬರ ಹೆಸರುಗಳನ್ನು ಹೇಳಿರಿ.

(೨) ಚಾಲುಕ್ಯರ ಕಾಲದಲ್ಲಿ ಆಗಿಹೋದ ಕೆಲ ಗ್ರಂಥಕರ್ತರ ಹೆಸರು ಹೇಳಿರಿ.

(೩) ನೃಪತುಂಗನು ಯಾರು ? ಆತನ ವೈಶಿಷ್ಟ್ಯವೇನು ?

(೪) ಕನ್ನಡ ಸಾಹಿತ್ಯಕ್ಕೆ ಸ್ತ್ರೀಯರೂ ಸೇವೆಯನ್ನು ಸಲ್ಲಿಸಿದ್ದಾರೆ. ಕೆಲ ಸ್ತ್ರೀಗ್ರಂಥಕರ್ತರ ಮತ್ತು ಅವರ ಗ್ರಂಥಗಳ ಹೆಸರು ಹೇಳಿರಿ.

(೫) ಕನ್ನಡ ಸಾಹಿತ್ಯವನ್ನು (೧) ಜೈನ ಸಾಹಿತ್ಯ (೨) ವೀರಶೈವ ಸಾಹಿತ್ಯ ಮತ್ತು (೩) ಬ್ರಾಹ್ಮಣ ಸಾಹಿತ್ಯವೆಂದು ವಿಭಾಗಿಸುವುದುಂಟು. ಪ್ರತಿಯೊಂದು ವಿಭಾಗದಲ್ಲಿಯ ೪-೫ ಗ್ರಂಥಕರ್ತರ ಹೆಸರುಗಳನ್ನು ಹೇಳಿರಿ.

(೬) ಕನ್ನಡ ಸಾಹಿತ್ಯದಲ್ಲಿ ಶಿವಶರಣರಿಗೂ ಮತ್ತು ಹರಿದಾಸರಿಗೂ ಹೆಚ್ಚಿನ ಸ್ಥಾನವು ಏಕೆ ಇದೆ ?

(೭) ಇವರು ಯಾವ ಯಾವ ಗ್ರಂಥಗಳನ್ನು ಬರೆದಿದ್ದಾರೆ ? (೧) ಪಂಪ, (೨) ರನ್ನ (೩) ಜನ್ನ (೪) ಅಭಿನವಪಂಪ (೫) ನಯಸೇನ (೬) ಕುಮಾರವ್ಯಾಸ (೭)ಮಲ್ಲಿಕಾರ್ಜುನ (೮)ಕಂತಿ.

(೮) ಈ ಗ್ರಂಥಗಳನ್ನು ಯಾರು ಬರೆದಿದ್ದಾರೆ ? (೧) ಕವಿರಾಜಮಾರ್ಗ (೨) ಶಬ್ದಮಣಿ ದರ್ಪಣ (೩) ಕಬ್ಬಿಗರ ಕಾವ (೪) ಜಗನ್ನಾಥ ವಿಜಯ (೫)ರಾಜಶೇಖರವಿಳಾಸ (೬)ಜೈಮಿನಿಭಾರತ

(೯) ಕನ್ನಡ ಸಾಹಿತ್ಯದಲ್ಲಿ ಎಷ್ಟು ಬಗೆಯ ಗ್ರಂಥಗಳಿವೆ ?

(೧೦) ಮೈಸೂರ ವಿಶ್ವವಿದ್ಯಾಲಯದ ಪ್ರಚಾರ ಪುಸ್ತಕ ಮಾಲೆಯಲ್ಲಿಯ 'ಕನ್ನಡ ಸಾಹಿತ್ಯ'ವೆಂಬ ಚಿಕ್ಕ ಪುಸ್ತಕವನ್ನು ಓದಿರಿ.

**ವ್ಯಾಕರಣ:—**

**ಕೆಳಗಿನ ಮಾತುಗಳ ಅರ್ಥವನ್ನೇ ಹೇಳುವ ಒಂದೊಂದೇ ಶಬ್ದವನ್ನು ಹೇಳಿರಿ:—**

(೧) ಕುದುರೆಯ ಕೂಗು.
(೨) ಬೆಟ್ಟ ಅಥವಾ ನದಿಯ ಬಳಿಯ ಗ್ರಾಮ.
(೩) ರಾಗಬದ್ಧವಾದ ಕಾವ್ಯವಾಚನ.
(೪) ಹಣವಿದ್ದರೂ ಬಡತನದ ಸೋಗು ಹಾಕುವವ.
(೫) ಸೈನ್ಯದ ಮುಂಗಡೆಯಲ್ಲಿ ಆಗುವ ಕಾಳಗ.



# ೧೪. ನಾಗರಿಕ

[ಹಜಾರ ರಾಮಸ್ವಾಮಿ ದೇವಸ್ಥಾನ; ರಾತ್ರಿ ಬೆಳದಿಂಗಳು. **ನಾಗರಿಕ**]

**ನಾಗರಿಕ:—**

ಮಗುದೊಂದು ಪಾಳ್ಗುಡಿಯು; ಗುಡಿಗಳಿಗೆ ಕೊರತೆಯಿಲ್ಲ
ಕಲ್ಲಿಹವು, ಮುರುಕು ಗೋಡೆಗಳಿಹವು; ಪರಮಾತ್ಮ
ನೆಂಬುವನು ಬಿಟ್ಟೋಡಿ ಪೋಗಿಹನು ದೇವಂಗೆ
ನೆಲೆಯಾಗಬೇಕೆಂದು ಕಲ್ಲಿನಲಿ ಜೀವವಂ
ತುಂಬಿದರು ಶಿಲ್ಪಿಗಳು; ಮಾದೇವನೆಮ್ಮೊಳಗೆ
ತುಂಬಲಿಲ್ಲ. ನಾವಿಂದು ಸತ್ತಿರುವ ಹೆಣವಲ್ಲ
ಬದುಕಿರುವ ಜೀವವಲ್ಲ.

[ಸುತ್ತಲೂ ನೋಡಿ ಮಂಟಪದಲ್ಲಿ ಕುಳಿತುಕೊಳ್ಳುವನು]

ಆಯಾಸವಾಗಿಹುದು.

[ಮಲಗಿ ನಿದ್ದೆಮಾಡುವನು. ಕೆಲಕಾಲದಮೇಲೆ ತಟ್ಟಿದ ಹಾಗಾಗುವುದು. ಕೂಗಿದ ಹಾಗಾಗುವುದು.]

**ಅಶರೀರವಾಕ್ಕು:—**

ಏಳೇಳು, ಏಳೇಳು.

[ನಾಗರಿಕನು ಎದ್ದು ಕುಳಿತುಕೊಳ್ಳುವನು.]

**ನಾಗರಿಕ:—**

ಆರೆನ್ನ ತಟ್ಟಿದರು ?

ಏನೆಂದು ಹೇಳಿದರು. ನಿಜವಾಗಿ ತಟ್ಟಿದರೆ ?

[ಸ್ವಲ್ಪ ಹೊತ್ತು ನೋಡಿ]

ಒಮ್ಮೆ ತಾ ಬಂದವರು ಬಾರದಿಹರೇ ಮರಳಿ ?

[ಪುನಃ ಮಲಗುವನು]

**ಅಶರೀರವಾಕ್ಯ:—**

ಏಳೇಳು, ಏಳೇಳು.

**ನಾಗರಿಕ:—**

ಮತ್ತೆ ಬಿದ್ದುದು ಪೆಟ್ಟು.

[ಎದ್ದು ಕುಳಿತುಕೊಳ್ಳುವನು.]

ನೋಯುತಿರುವುದು ಬೆನ್ನು; ಪಾಳುಗುಡಿಯಲ್ಲಾರು
ಸೇರಿಹರೊ ! ಭೂತವೋ ? ಪ್ರೇತವೋ ? ಏನೊಂದು
ಕಾಣಿಸದು, ಮರೆಯಿಂದ ಕಾಡಿಪುದು. ಗಾಳಿಯೇಂ
ಸುಯ್ಯುತಿದೆ ! ಮರವೆಲ್ಲ ತೂಗುತಿವೆ. ಭೂಮಿಯಿದು
ನಡುಗುತಿದೆ. ಇಲ್ಲಿಹುದು ತರವಲ್ಲ. ಎತ್ತಲೇಂ
ತಳ್ಳುವುದೊ ಬಿರುಗಾಳಿ !

[ಇಳಿದು ದೂರ ನಿಲ್ಲುವನು. ಮಂಟಪವು ಕುಸಿದು ಬೀಳುವುದು]

ಅಕಟಕಟ ! ಮಂಟಪವೆ !

ಎನ್ನ ಗತಿ ತೀರಿತ್ತು, ಚಣದಲ್ಲಿ ತೀರಿತ್ತು !
ತಿಳಿಯದೆಯೆ ಪವಡಿಸಿದೆ. ಆರವನು ಕರುಣಾಳು !
ಏಳೇಳು ಏಳೆಂದು ಮುಂದಾಗಿ ಕೂಗಿದನು !
ತಟ್ಟಿ ಕೂಗಿದನು; ಮುಂದೊದಗುವಾಪತ್ತ
ತಿಳುಹಿದನು; ಸಲಹಿದನು. ಆರೆಂದು ತಿಳಿಯುವೆನು ?
ಜನರಹಿತವೀಗುಡಿಯು, ನರಪಿಳ್ಳೆಯೊಂದಿಲ್ಲ !

ದೇವನೇಂ ಸಲಹಿದನೆ ? ಕರುಣವೇನನಿತುಂಟೆ ?
ಅಣುವೊಳಗೆ ಅಣು ನಾನು; ಎನ್ನ ರಕ್ಷಿಸಲೇಕೆ ?
ಹುಲುಮನುಜನೆನ್ನೊಳಗೆ ದೇವಂಗೆ ದಯೆಯೇಕೆ ?
ತಿಳಿಯದಿದು ಅಕಟಕಟ ! ಬಂದು ತಟ್ಟಿದುದುಂಟು !
ಬಂದು ಕೂಗಿದುದುಂಟು ! ಹಾ ದೇವ ! ಹಾ ದೇವ !
ಸಾಮ್ರಾಜ್ಯಲಕ್ಷ್ಮಿಯೋಳ್ ಮರುಕವೊಂದಿರಲಿಲ್ಲ ?
ಅಂದೇಕೆ ಕಾಪಿಡಲು ಬರಲಿಲ್ಲ ?

[ಮನೆಯಿಂದ ಗಟ್ಟಿಯಾದ ಧ್ವನಿಯಲ್ಲಿ ಉತ್ತರವು ಬರುವುದು. **ದೇವರು**]

**ದೇವರು:—**

ಎನ್ನಿಚ್ಛೆ.
ಕೇಳಲಿಕೆ ನೀನಾರು ?

[ನಾಗರಿಕನು ಸ್ವಲ್ಪ ಹೊತ್ತು ಸ್ತಂಭಿತನಾಗುವನು]

ಏನಿದೀ ಗರ್ಜನೆಯು ?
ಆರಿಹರೋ ಗುಡಿಯಲ್ಲಿ ? 'ನೀನಾರು ? ಬಾ ಇಲ್ಲಿ'
ಸದ್ದಿಲ್ಲ, ಆರುಮೇಂ ಬರಲಿಲ್ಲ, ಉತ್ತರವ
ಕೊಡಲಿಲ್ಲ. ಧೇವನೋ ದೆವ್ವವೋ ? ಇರಲಿರಲಿ.
ಭೂತಗೀತಗಳಿಗಂಜುವುದಿಲ್ಲ ನಿಂತಿಲ್ಲಿ ನೋಡುವೆನು.

[ದೇವರು ಪ್ರವೇಶಿಸುವನು]

**ನಾಗರಿಕ:—**

ಕಣ್ಣು ಚುಚ್ಚುವ ಬೆಳಕು, ಆರೀತ ?

[ಹಿಂದಕ್ಕೆ ಸರಿಯುವನು]

**ದೇವರು:—**

ಕೇಳಲಿಕೆ ನೀನಾರು ?

[ದೇವರು ದಿಟ್ಟಿಸಿ ನೋಡುವನು. ನಾಗರಿಕನಿಗೆ ಕಣ್ಣೀರು ತುಂಬುವುದು]

ನಾಗರಿಕಃ—

ಆರಾದೊಡೇಂ ನಿನಗೆ?
ಕೇಳುವುದೆ. ಕೇಳಲಿಕೆ ಹಕ್ಕುಂಟು-ಕೇಳುವುದೆ.
ಈ ನಮ್ಮ ನಾಡಂತೆ ಬೇರೊಂದು ನಾಡುಂಟೆ?
ವೇದಗಳ ತೌರೂರು; ಯಾಗಗಳ ನೆಲೆವೀಡು;
ದೇವ ಭಾಷೆಯು ಕೆಚ್ಚು; ವೇದಾಂತ ಮಾರ್ಗಗಳು;
ಅವತಾರ ಲೀಲೆಗಳು; ವುತ ಶತದ ಜನ್ಮಗಳು;
ಸತ್ಯದಲಿ, ಧರ್ಮದಲಿ, ಭೋಗದಲಿ, ಭಾಗ್ಯದಲಿ
ಈ ನಮ್ಮ ನಾಡಂತೆ ಬೇರೊಂದು ನಾಡುಂಟೆ?
ಪುಣ್ಯಭೂಮಿಯಿದೆಂದು ಋಷಿವರರು ಚರಿಸಿದರು.
ಆಚಾರ್ಯರುದಿಸಿದರು; ತತ್ವಗಳ ತಿಳುಹಿದರು.
ಮಾಪುರುಷರೆನಿಬರೊ ಭಕ್ತಜನರೆನಿಬರೊ
ಮಹಿಮೆಯಂ ಬೀರಿದರು; ದೇವನಂ ಪಾಡಿದರು.
ಕರ್ಮಭೂಮಿಯಿದೆಂದು ವೀರರವತರಿಸಿದರು.
ವಾಸವನ ಸೋಲಿಸುವ ವೈಭವದಿ ಮೆರೆದವರು.
ಸಾರ್ವಭೌಮರ ಸಾಲು, ಚಂದ್ರ ಸೂರ್ಯರ ವಂಶ,
ಸತ್ವದಲಿ ಶೌರ್ಯದಲಿ ಧೈರ್ಯದಲಿ ವೀರ್ಯದಲಿ
ಈ ನಮ್ಮ ನಾಡಂತೆ ಬೇರೊಂದು ನಾಡುಂಟೆ?
ಅಚ್ಚರಿಯ ರೂಪಿನಲಿ ಸುಗುಣದಲಿ ಶೀಲದಲಿ
ಹದಿಬದೆಯರೆನಿಬರೊ ಸೂರ್ಯನಂ ತಡೆದವರು,
ಯಮನನ್ನು ಗೆದ್ದವರು, ಹರಿಯಜಮಹೇಶರನು
ಶಿಶುಗಳಂ ಮಾಡಿದರು, ಕೀರ್ತಿಯಂ ಬೆಳಗಿದರು.
ಈ ನಮ್ಮ ನಾಡಂತೆ ಬೇರೊಂದು ನಾಡುಂಟೆ?
ಕೇಳಲಿಕೆ ನೀನಾರು! ಆರು ಕಟ್ಟಿದ ರಾಜ್ಯ?
ಆರು ಸಲಹಿದ ಧರ್ಮ? ಕಳ್ಳರೇ ಕೊರಮರೇ,
ಯತಿವರರು ಗುರುವರರು ಶೃಂಗಗಿರಿ ಪೀಠದಲಿ

ಆದಿಶಂಕರರನೆಡೆಗೆ ಬಂದವರು ? ಬರಿದೇಕೆ
ಗರ್ಜನೆಯು ? ಗರ್ಜನೆಗೆ ಹೆದರುವೆನೆ ?

**ದೇವರು:—**

ಮೆಚ್ಚಿದೆನು,
ಮೆಚ್ಚಿದೆನು. ದೇವನಿದೊ ಬಂದಿಹೆನು, ಕಾಪಿಡಲು
ಬಂದಿಹೆನು.

**ನಾಗರಿಕ:—**

ದೇವನೇಂ ? ದೇವನಪ್ಪೊಡೆ ತೋಳ
ಬಲವುಂಟೆ ? ಮನವುಂಟೆ ಸಂಹಾರ ಲೀಲೆಯಲಿ ?

**ದೇವರು:—**

ವರಗಳಂ ನೀಡುವೆನು, ಬೇಕಾದುದಂ ಬೇಡು.

**ನಾಗರಿಕ:—**

ಬೇಡುವವ ನಾನಲ್ಲ; ದೇವನೆಂಬುವನಿಲ್ಲ.

**ದೇವರು:—**

ಸತ್ಯದಿಂ ಪೇಳುವೆನು ದೇವನೆಂಬುವನುಂಟು.

**ನಾಗರಿಕ:—**

ನಮ್ಮ ದೇಶದೊಳಿಲ್ಲ, ಪೋಗಿಹನು ಬೇರೆಡೆಗೆ,
ಭರತಖಂಡದಿಯೆಂದೊ ಹೆದರಿ ಓಡಿದನವನು.

**ದೇವರು:—**

ಓಡಿಲ್ಲ ನಿಂದಿಹನು, ದೇವನಂ ನಂಬುವುದು.

**ನಾಗರಿಕ:—**

ದೇವನಂ ನಂಬಿದೆವು ರಾಜ್ಯವಂ ನೀಗಿದೆವು !
ಆ ದೇವನೆಂಬುವಗೆ ಸತ್ಯ ಧರ್ಮಗಳಿಲ್ಲ.
'ಅವತಾರ ಮಾಡುವೆನು ಧರ್ಮವದು ಲೋಪಿಸಲು,
ಉದ್ಧಾರ ಮಾಡುವೆನು'; ಎಂದು ಸಾರಿದನವನು.
ಅವತಾರ ಮಾಡಿದನೆ ? ಬಂದು ಸಲಹಿದನೆ !

ಮಾತೃಭೂಮಿಯಿದೆಂದು ಕರಗಿದನೆ ? ಮರುಗಿದನೆ ?
ಧರ್ಮವನು ರಾಜ್ಯವನು ಅನ್ಯರಿಗೆ ತೆರಿಸಿದನು,
ಯವನರಿಂಗೆ ಹೆದರಿದನು, ಹೇಡಿಯಾಗೋಡಿದನು.
ಇನ್ನು ನಂಬುವುದುಂಟೆ ಆ ಹೇಡಿ ದೈವವನು.

**ದೇವರು:—**

ಎನ್ನ ಬಲ್ಲವರಿಲ್ಲ; ಎನಗೆ ಬಲ್ಲಿದರಿಲ್ಲ;
ನಂಬಲರಿಯರು ನರರು; ನಂಬಿಕೆಟ್ಟವರಿಲ್ಲ.

**ನಾಗರಿಕ:—**

ನಿನ್ನ ನಂಬುವುದೇಕೆ ? ಆಶ್ರಯವು ನಮಗೇಕೆ ?
ಬಾಹುದಂಡಗಳಲ್ಲಿ ನಂಬಿಕೆಯನಿಡೆ ಲೇಸು
ತಾನಹುದು. ಹತ್ತಾರು ರಾಜ್ಯವಂ ಚಕ್ರಾಧಿ
ಪತ್ಯಮಂ ಕಟ್ಟುವೆವು ನಾವಿಂದು. ಹಂಗಿನೊಳು
ನಾವಿರೆವು; ನಿನಗಿಂತ ಮಿಗಿಲಾದ ದೇವನಂ
ಸೃಷ್ಟಿಸುತ, ಲೋಕಗಳ ಸೃಷ್ಟಿಸುತ, ಧಾತೃವಿಗೆ
ಧಾತೃವೆನಿಸುತಲೀಗ ಕೌಶಿಕನ ಸಾಹಸವ
ತೋರುವೆವು. ಕೈಕಟ್ಟಿ ಕುಳ್ಳಿಹರು ನಾವಲ್ಲ;
ಅವತಾರ ಮಾಡೆಂದು ಬೇಡುವವರಾವಲ್ಲ;
ನೀನಿನ್ನು ಬೇಕಿಲ್ಲ. ನಿನ್ನೆಡೆಗೆ ಪೋಗುವುದು.
ಸುಖದಿಂದ ಬಾಳುವುದು, ನಿದ್ದೆಯಂ ಮಾಡುವುದು.

**ದೇವರು:—**

ನಾನು ಕಣ್ಮುಚ್ಚಿದೊಡೆ ಉಳಿಯುವವೆ ಲೋಕಗಳು ?
ನಿದ್ದೆಯೆಂಬುದನರಿಯೆ; ಸುಖಲೇಶವಿಲ್ಲೆನಗೆ;
ಸರ್ವಜೀವರ ಕರ್ಮಸಾಕ್ಷಿಯೆಂದೆನಿಸಿಹೆನು.

**ನಾಗರಿಕ:—**

ಅಹುದಹುದು ಬಲ್ಲೆನದ; ಗೋವುಗಳ ಕೊಲ್ಲುತಿರೆ
ಸಾಕ್ಷಿಯಾಗಿಹೆ ನೀನು !

**ದೇವರು:—**

ಹುಟ್ಟುವುವು ಸಾಯುವುವು
ಜೀವರಾಶಿಗಳೆಲ್ಲ. ಅದರೊಳಗೆ ಹಿರಿದೆಂದು
ಕಿರಿದೆಂದು ಆವುದಂ ನೋಡುವುದು ? ಸರ್ವ ಸಮ
ತೆಯುಳಿಹೆನು. ಸರ್ವಜೀವರಲಿಹೆನು. ಕಾಲಗತಿ
ಯನುಸರಿಸಿ ಧರ್ಮವದು ಬೆಳೆಯುವುದು. ಎನ್ನಾಜ್ಞೆ,
ಇದ ಮೀರಲಳವಲ್ಲ.

**ನಾಗರಿಕ:—**

ಮೀರುವೆವು ನಾವಿಂದು.

**ದೇವರು:—**

ಮೀರುವಿರಿ ನೀವಿಂದು ! ಮೀರುವುದ ನೋಡುವೆನು.

[ ದೇವರು ನಕ್ಕು ಹೊರಟು ಹೋಗುವನು. ]

— ಎಂ. ಆರ್. ಶ್ರೀ.



# ಪರಿಚಯ

ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿಯವರು ಮೈಸೂರ ಮಹಾರಾಜಾ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಇವರು ಒಳ್ಳೇಯ ವಾಗ್ಮಿಗಳೂ ನುರಿತ ಲೇಖಕರೂ, ಶ್ರೇಷ್ಠ ವಿಮರ್ಶಕರೂ ಉತ್ತಮ ಕವಿಗಳೂ ಆಗಿದ್ದಾರೆ. ಇವರ "ಭಕ್ತಿ ಭಾಂಡಾರಿ ಬಸವಣ್ಣನವರು" ಎಂಬ ವಿಮರ್ಶಾ ಗ್ರಂಥವು ಕನ್ನಡ ಸಾಹಿತ್ಯದಲ್ಲಿ ತುಂಬಾ ಮನ್ನಣೆಯನ್ನು ಪಡೆದಿದೆ. ಇವರ 'ನಾಗರಿಕ' ಎಂಬ ಸರಳ ರಗಳೆಯ ನಾಟಕವು ಕನ್ನಡ ಸಾಹಿತ್ಯ ಪ್ರಪಂಚದಲ್ಲಿಯೇ ಕ್ರಾಂತಿಯನ್ನುಂಟುಮಾಡಿತು. " ಕವಿಯ ಸೋಲು " ಎಂಬ ಗೀತಸಂಗ್ರಹವನ್ನೂ ಇವರು ಪ್ರಕಟಿಸಿದ್ದಾರೆ. ಇತ್ತೀಚಿಗೆ ಮೈಸೂರ ಇತಿಹಾಸಕ್ಕೆ ಸಂಬಂಧಪಟ್ಟ " ಧರ್ಮ ದುರಂತ " ಎಂಬ ಒಂದು ಸರಳರಗಳೆಯ ನಾಟಕವನ್ನೂ ಬರೆದು ಪ್ರಕಟಿಸಿದ್ದಾರೆ.

ಇವರ ಶೈಲಿಯಲ್ಲಿ ಸರಳತೆಯಿದೆ. ನೇರವಾಗಿ ಹೃದಯವನ್ನು ತಟ್ಟುವ ಭಾವಾವೇಶವೂ, ಕವಿಸಹಜವಾದ ಪ್ರತಿಭಾವಂತಿಕೆಯೂ ಅಲ್ಲಲ್ಲಿ ತುಂಬಿರುತ್ತವೆ 'ವಚನ ವಾಙ್ಮಯ'ದ ಸವಿಯನ್ನು ಸವಿದು ಅದರ ಸಾರವನ್ನೇ ತಮ್ಮ ಶೈಲಿಯಲ್ಲಿ ತುಂಬಿಕೊಂಡಂತಿದೆ.

ಈ ಅವತರಣಿಕೆಯನ್ನು ಇವರ ಸುಪ್ರಸಿದ್ಧ ನಾಟಕವಾದ "ನಾಗರಿಕ" ದಿಂದ ಆಯ್ದುಕೊಂಡಿದೆ

**ಕಥಾಸಂದರ್ಭ:—**

ಶತ್ರುಗಳ ದಾಳಿಯಿಂದ ಹಾಳಾಗಿ ಹುಡಿಗೂಡಿ ಹೋದ ವಿಜಯ ನಗರದ ದರ್ಶನದಿಂದ ಕವಿಯ ಅಂತಃಕರಣದಲ್ಲಿ ಉಂಟಾದ ಕಳವಳವೇ ಈ ಸುಂದರವಾದ 'ರೂಪಕದಲ್ಲಿ' ದರ್ಶಿತವಾಗಿದೆ.

ಹಾಳು ಹಂಪೆಯ ದುರವಸ್ಥೆಯನ್ನು ಕಂಡ, ನಾಟಕದ ನಾಯಕನಾದ ನಾಗರಿಕನಿಗೆ ದೇವರ ಮತ್ತು ಧರ್ಮದ ಮೇಲಿನ ಶ್ರದ್ಧೆಯೇ

ಇಲ್ಲದಂತಾಗುತ್ತದೆ. "ಕಲ್ಲುಗಳ ಲೋಹಗಳ ನಂಬಿದರು, ದೇಗುಲವ ಕಟ್ಟಿದರು. ಬಂದು ಪೊರೆಯುವನೆಂದು ಪೂಜೆಯಂ ಮಾಡಿದರು, ಆದರೆ ದೇವನೇಂ ಬಂದನೇ? ಬಂದು ಪೊರೆದನೆ?" ಎಂದು 'ನಾಗರಿಕ' ದೇವನ ಮೇಲಿನ ನಂಬಿಕೆಯನ್ನು ಕಳೆದುಕೊಳ್ಳುತ್ತಾನೆ ಹಂಪೆಯ ಒಂದೊಂದು ಭಗ್ನಾವಶೇಷವೂ ಅವನ ಅಂತಃಕರಣದಲ್ಲಿ ಮರ್ಮಾಂತಿಕವಾದ ನೋವನ್ನುಂಟುಮಾಡುತ್ತದೆ. ದೇವನೆಂಬುವನಿದ್ದರೆ ತನಗುಂಟಾಗಿರುವ ಈ ದುರವಸ್ಥೆಯನ್ನು ಆತನು ಸಹಿಸುತ್ತಿದ್ದನೆ? ಸದಾಶಿವಲಿಂಗದ ಬಳಿ ಬರುತ್ತಾನೆ. ಸದಾಶಿವನ ಆ ಅನಾಥಾವಸ್ಥೆಯನ್ನು ಕಂಡು ಮರುಗುತ್ತಾನೆ. ಮುಖ ಭಂಗಿತವಾದ ನರಸಿಂಹ ವಿಗ್ರಹವನ್ನು ಕಂಡು ದುಃಖ ಉಕ್ಕರಿಸಿ ಬರುತ್ತದೆ. 'ನರಸಿಂಹ ನರಸಿಂಹ' ನಿನಗೇಕೆ ಈ ಗತಿಯು' ಎಂದು ಗೋಳಿಡುತ್ತಾನೆ. ನಾಗರಿಕ ಮುಂದೆ ಮುಂದೆ ಸಾಗುತ್ತಾನೆ. ಜನರು ಈತನ ಹುಚ್ಚನ್ನು ಅರಿಯರು. ಇವನು ಓರ್ವ ಮರುಳ ಎಂದು ನಂಬುತ್ತಾರೆ. ನಾಗರಿಕ ಹಜಾರ ರಾಮಸ್ವಾಮಿ ದೇವಸ್ಥಾನಕ್ಕೆ ಬರುತ್ತಾನೆ ದೇವನಿಲ್ಲದ ಮತ್ತೊಂದು ಪಾಳ್ಗುಡಿಯನ್ನು ಕಂಡು ಕನಿಕರ ಪಡುತ್ತಾನೆ. ವಿಶ್ರಾಂತಿಗೆಂದು ಅಲ್ಲಿ ಒರಗುತ್ತಾನೆ ಅಲ್ಲಿ ನಡೆದ ಘಟನೆಗಳೇ ಅವತರಣಿಕೆಯಲ್ಲಿ ನಿರೂಪಿತವಾಗಿವೆ.

**ಟಿಪ್ಪಣಿ:—**

ಮರುಕ; ಕರುಣೆ, ದಯೆ
ಕೆಚ್ಚು; ಧೈರ್ಯ
ವಾಸವ; ಇಂದ್ರ
ಧಾತೃ; ಸೃಷ್ಟಿಕರ್ತ
ಕೌಶಿಕ; ವಿಶ್ವಾಮಿತ್ರ

ಸೂರ್ಯನಂ ತಡೆದವರು:— ಪತಿವ್ರತಾ ಸ್ತ್ರೀಯೊಬ್ಬಳು ತನ್ನ ರೋಗಿಯಾದ ಪತಿಯ ಆದೇಶದಿಂದ ಅವನನ್ನು ವೇಶ್ಯಾಗೃಹಕ್ಕೆ ಹೊತ್ತುಕೊಂಡು ಹೋಗುವಾಗ ಅಣಿಮಾಂಡವ್ಯ ಋಷಿಗೆ ಕಾಲು ತಾಕಿತಂತೆ ಅವನು ಬೆಳಗಾಗುವಷ್ಟರಲ್ಲಿ ನಿನ್ನ ಪತಿಯು ಮೃತನಾಗಲಿ ಎಂದು ಶಾಪಕೊಟ್ಟನು. ಆಗ ಆ ಪತಿವ್ರತೆಯು ಸೂರ್ಯನೇ ಉದಯಿ

ಸದಿರಲಿ ಎನ್ನಲು ಮುಂದೆ ಅವಳ ಪತಿಗೆ ಜೀವದಾನ ದೊರೆತಮೇಲೆ ಸೂರ್ಯೋದಯ ವಾಯಿತೆಂದು ಕತೆಯಿದೆ.

ಯಮನನ್ನು ಗೆದ್ದವರು— ತನ್ನ ಸತೀತ್ವ ಪ್ರಭಾವದಿಂದಲೂ ಚಾತುರ್ಯ ದಿಂದಲೂ ಯಮನನ್ನು ಸೋಲಿಸಿ ಅವ ನಿಂದ ತನ್ನ ಪತಿ ಸತ್ಯವಾಹನನ ಜೀವನವನ್ನು ಮರಳಿ ಪಡೆದುಕೊಂಡವಳು ಸಾವಿತ್ರಿಯು.

ಹರಿಯುಜಮಹೇಶರನು ಶಿಶುಗಳಂ ಮಾಡಿದರು:— ಮಹಾ ಪತಿವ್ರತಾ ಶಿರೋಮಣಿಯೂ ಅತ್ರಿ ಮಹರ್ಷಿಗಳಪತ್ನಿಯೂಆದ ಅನಸೂಯೆಯ ಬಳಿಗೆ ಬ್ರಹ್ಮ-ವಿಷ್ಣು-ಮಹೇಶ್ವರರು ಹೋಗಿ ಅವಳ ಸತ್ವಪರೀಕ್ಷೆ ಮಾಡಲು, ನಗ್ನಳಾಗಿ ಉಣಬಡಿಸಲು ಕೇಳಿದರು. ಅವಳು ತಕ್ಷಣ ಅವರನ್ನು ತನ್ನ ಪುಣ್ಯಶಕ್ತಿಯಿಂದ ಕೂಸು ಗಳನ್ನಾಗಿ ಮಾಡಿ ಅವರ ಇಷ್ಟವನ್ನು ಪೂರೈ ಸಿದಳು.

**ಅಭ್ಯಾಸಃ—**

## ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

(೧) ಹಜಾರರಾಮಸ್ವಾಮಿಯ ದೇವಸ್ಥಾನವನ್ನು ನೋಡುತ್ತಲೆ ನಾಗ ರಿಕನ ಅಂತಃಕರಣದಲ್ಲಿ ಉಂಟಾದ ಭಾವನೆಗಳು ಯಾವವು ?

(೨) ದೇವರು ಬಂದು ತಟ್ಟಿ ನಾಗರಿಕನನ್ನು ಎಬ್ಬಿಸಿದಾಗ ನಾಗರಿಕನ ಮನಸ್ಸಿನಲ್ಲಿ ಯಾವ ಭಾವನೆಗಳು ಉಂಟಾಗುವವು ?

(೩) ಈ ನಮ್ಮ ನಾಡು ಎಂತಹದೆಂದು ನಾಗರಿಕನು ವರ್ಣಿಸುತ್ತಾನೆ?

(೪) ನಾಗರಿಕನು ದೈವವನ್ನು ಇನ್ನು ನಂಬುವದಿಲ್ಲ ಎಂದು ಏಕೆ ಹೇಳುತ್ತಾನೆ ?

(೫) ನಾಗರಿಕನು ಯಾವ ಹಿರಿದಾದ ಸಾಹಸಗಳನ್ನು ತಾನು ತೋರು ತ್ತೇನೆ ಎಂದು ಹೇಳುತ್ತಾನೆ ?

———

# ಪರಿವಿಡಿ

# ೧. ದರ್ಶನ ಸಂಭ್ರಮ

ಆವ ವೇಷವ ತೊಟ್ಟಿಹನೊ ಮೇ ।
ಣಾವ ಪಥದಲಿ ಸುಳಿವನೋ ದಿಟ ।
ವಾವ ವೇಳೆಯಲೊಲಿದು ಬಹನೋ ಶಿವ ಮಹಾದೇವ ॥

ಭಾವಿಸುವೊಡರಿದೆನುತಲಾ ಪ್ರಭು- ।
ದೇವರಿಂಗೆ ತಾನಿದಿರುವೋಗುತ ।
ಲೀ ವಿಚಾರವನೆಣಿಸುತಿರ್ದನು ಬಸವ ದಂಡೇಶ ॥ ೧ ॥

ಇಡಿದ ಸರ್ವಾಂಗದ ವಿಭೂತಿಯ ।
ಜಡಿದ ರುದ್ರಾಕ್ಷಿಗಳ ಮಾಲೆಯ ।
ತೊಡಿಗೆಗಳ ಧವಳಾಂಬರಂಗಳ ಮೈಯ್ಯ ಮುಖಕಳೆಯ ॥

ಮಡಿವಳ್ಳೆಯ್ಯನು ಚಿನ್ನಬಸವನು ।
ಹಡಪದಪ್ಪಣ್ಣಗಳು ಸಹಿತವೆ ।
ನಡೆದನಿದಿರನು ಬಸವ ದಂಡಾಧೀಶನಲ್ಲಮಗೆ ॥ ೨ ॥

ಎಡಬಲಂಗಳೊಳೆಯ್ದೆ ಭಕ್ತರ ।
ಗಡಣ ಹಿಂಭಾಗದಲಿ ನಾನಾ ।
ಪೊಡವಿಪಾಲ ಕುಮಾರಕರ ಸಂದಣಿಯು ಸಂದೋಹ

ಬಿಡದೆ ಕೈವಾರಿಸುವ ನೆಲನು ।
ಸ್ಪಡಣೆಕಾರರ ಮೊತ್ತಗಳು ಮುಂ ।
ಗುಡಿಯುಲೊಪ್ಪಿರೆ ನಡೆದನಿದಿರನು ಬಸವ ದಂಡೇಶ ॥ ೩॥

ಮಾವುತರು ಮನ್ನೆಯರು ರಥಿಕರು ।
ರಾವುತರು ಕರಣಿಕರು ಕವಿಗಳು ।
ಭಾವುಕರು ಭರತಜ್ಞರೆಲ್ಲಾ ಪರಿಯ ಪರಿಣತೆಯ ॥

ಸೇವಕರು ಸಹಿತಲ್ಲಮಪ್ರಭು- ।
ದೇವರಡಿಗಿದಿರಾಗಿ ನಡೆದನು ।
ಪಾವನಾತ್ಮಕ ಬಸವದಂಡಾಧೀಶನರ್ತಿಯಲಿ ॥ ೪ ॥

ಪರಿ ಪರಿಯ ಸುತ್ತಿಗೆಯ ಸಾಲಿನ ।
ಪರಿ ಪರಿಯ ಚಾಮರದ ಚಾಳಿಯ ।
ಪರಿ ಪರಿಯ ಕೈಕಂಬಿಕಾರರು ಜಡಿವ ಗಡಬಿಡಿಯ ॥

ಪರಿ ಪರಿಯ ವ್ಯೆಯ್ದ್ದಡಹಿನುಲುಹಿನ ।
ಪರಿ ಪರಿಯ ಭುಜಬಲದ ಸುಭಟರ ।
ನೆರವಿ ಸಹಿತಿದಿರಾಗಿ ನಡೆದನು ಬಸವನಲ್ಲಮಗೆ ॥ ೫ ॥

ನಡೆವ ಗಮಕದ ನಗುವ ಚೆಲುವಿನ ।
ನುಡಿಯ ನುಂಪಿನ ಸೊಬಗನೇ ಸಾ ।
ಲಿಡುವ ನೋಟದ ನಟಣೆಯುನೆ ನಾಟಿಸುವ ತನುಲತೆಯ ॥

ಒಡನೆ ಕವಿತಹ ತುಂಬಿಗುಚಿತವ ।
ಕೊಡುವ ಮೊಯ್ಗುಂಪುಗಳ ಸೊಂಪಿನ ।
ಮುದದಿಯರು ಪಿಡಿದೆತ್ತುತಿರ್ದರು ಮಂಗಳಾರತಿಯ ॥ ೬ ॥

ಹಿರಿದು ಗರ್ಜಿಸುವಾನೆಗಳು ಕೇಂ ।
ಕರಿಸುತಿಹ ವಾಜಿಗಳು ದಿಗುತಟ ।
ಬಿರಿಯೆ ಚೀರುವ ಶಂಖವೌರಿಯು ಕೊಂಬು ಕಹಳೆಗಳು ॥

ಧರಣಿಯದಿರಲು ಗಿರಿಗಳ ರುಳಲು ।
ನೆರೆದು ಮೊಳಗುವ ಭೇರಿ ತಂಬಟೆ ।
ಕರಡೆ ನಿಸ್ಸಳ ಸಹಿತಲಿದೆರೆಯ್ದಿದನು ಬಸವಣ್ಣ ॥೭॥

ಎಲ್ಲಿ ನೋಡಲು ಛತ್ರ ಚಾಮರ ।
ವೆಲ್ಲಿ ನೋಡಲು ಸಿಂಧ ಸೀಗುರಿ ।
ಯೆಲ್ಲಿ ನೋಡಲು ಸೊಕ್ಕಿದಾನೆಯ ಸುಳಿವ ಹೆಕ್ಕಳವು ॥

ಎಲ್ಲಿ ನೋಡಲು ಕುಣಿವ ಕುದುರೆಗ ।
ಳೆಲ್ಲಿ ನೋಡಲು ನಲಿವ ಪುರಜನ ।
ವೆಲ್ಲ ಸಹಿತಿದಿರಾಗಿ ನಡೆದನು ಬಸವ ದಂಡೇಶ ॥೮॥

ವಂದನೆಯ ವೇಷಂಗಳಂದವ ।
ಹೊಂದದೆಲ್ಲರ ಕಂಗೆ ಮರುಳಿನ ।
ಚೆಂದದಿಂಗಿತದಿಂದೆ ಸುಳಿದರೆ ಬಸವ ಬಳಿಕೆನ್ನ ॥

ಅಂದದೊಳಗನು ತಿಳಿವನೋ ಮೇಣ್ ।
ಮಂದಮತಿಯಾಗಿಹನೊ ನಾನಿದ ।
ನಿಂದು ನೋಡುವೆನೆನುತಲಾ ಪ್ರಭುರಾಯನನುಗ್ಗೈದ ॥೯॥

ಅಣಕಿಸುವ ಬಾಧಕರ ಬಾಯನೆ ।
ಹೊಡೆದು ಬಸವನ ಭಕ್ತಿ ಭಾರದ ।
ಸೊಣಕೆಯನೆ ಹುಂಕೊಂಡು ಪೂರೈಸಲಿಕೆ ಬೇಕೆನುತ ॥

ಎಣಿಸಬಾರದ ನೆರೆದ ನೆರವಿಯು ।
ಕಣ್ಣು ಮನಕೆ ಕಾಣಿಸಿದನೊಂದೇ ।
ಕ್ಷಣದೊಳಗೆ ನಮ್ಮಲ್ಲಮಪ್ರಭು ಲಿಂಗ ಲೀಲೆಯಲಿ ॥೧೦॥

ಬಿಟ್ಟ ಮಂಡೆಯ ಕೆಂಚುಗೂದಲ ।
ನಿಟ್ಟೊಡಲ ನಿಡುದೋಳ ತೊನಹಿನ ।
ಮುಟ್ಟದೆವೆಗಳ ನೆಟ್ಟ ನೋಟದ ಲಂಬ ಕರ್ಣಗಳ

ದಟ್ಟಡಿಯ ಮಲೆತಂಗದೊಲಹಿನ ।
ಕಟ್ಟಳೆಯ ಕಡು ಮರುಳು ವೇಷವ ।
ತೊಟ್ಟು ತೊಟ್ಟನೆ ಸುಳಿದನಾ ಪ್ರಭುಲಿಂಗ ಲೀಲೆಯಲಿ ॥೧೧॥

ಉರುಗು ಟೊಂಕದ ಕುಂಟಗಾಲಿನ ।
ಬೆರೆತ ಬಿಂಕದ ಮೆಯ್ಯ ಬಿಗುಹಿನ ।
ತರೆದ ಬಾಸುಳ ಬದಿಯ ಮುಸುರುವ ನೊಣದ ಹುಣ್ಣುಗಳ ॥

ಕಿರುನಗೆಯ ಕಟವಾಯ ಜೋರಿನ ।
ಕುರುಹನಡಗಿಸಿಕೊಂಡು ಹಸ್ತದ ।
ನಿರುಗೆಯಲಿ ನೆರೆ ಸುಳಿದನಾ ಪ್ರಭುಲಿಂಗ ಲೀಲೆಯಲಿ ॥೧೩॥

ನೋಡುವರ ನೆರೆಯಟ್ಟ ಮುಟ್ಟಸಿ ।
ಓಡಿ ಹೋಗುತ ಮರಳಿ ಹಿಂದಕೆ ।
ಕೋಡ ಕೈಯ್ಯವರುಗಳನೇಡಿಸಿ ಬೀಳುತೇಳುತಲಿ ॥

ಹಾಡುತಲಿ ನಲಿ ನಲಿದು ಹರಿಸುಟಿ ।
ಯಾಡುತಲಿ ನಾನಾ ವಿನೋದವ ।
ಮಾಡುತಿರ್ದನು ಜಗದೊಳಾ ಪ್ರಭು ಲಿಂಗ ಲೀಲೆಯಲಿ ॥೧೩॥

ಕಂಡವರು ಬೆರಗಾಗಿ ಬೆಬ್ಬಳ |
ಗೊಂಡು ನೋಡುತಲಿರ್ದರಾತನ |
ದಂಡಿಯನು ತಾವರಿಯಲರಿಯದೆ ಕೂಡೆ ಜನವೆಲ್ಲ ||

ಕಂಡನಾತನ ಕಪಟ ವೇಷದ |
ಕಂಡಿಯನು ನೆರೆನೋಡಿ ಭಾವಿಸಿ |
ದಂಡ ನಾಯಕ ಬಳಿಕ ನಿಶ್ಚೈಸಿದನು ಗುರುವೆಂದು ||೨೪||

ಉಕ್ಕಿದುದು ಮನವರಿದು ಕಂಗಳ |
ಮುಕ್ಕುಳಿಸಿದುವು ಮೂರ್ತಿಯನು ಕವಿ |
ದೊಕ್ಕುವಾನಂದಾಶ್ರು ತಲೆದೋರಿದುವು ತನು ಪುಳಕ ||

ಮಿಕ್ಕುಮಿಗೆ ಮತಿ ಮರೆದು ಹರುಷವು |
ಹಕ್ಕೆಗೊಂಡುದು ನಲವಿನಲಿ ವೈ |
ಯಿಕ್ಕಿದನು ಬಸವಣ್ಣನಲ್ಲಮ ಲಿಂಗಸಂಭ್ರಮಯಲಿ ||೧೫||

ಘನಮಹಿಮ ಶಿವಭಕ್ತರೆಲ್ಲರು |
ತನ ತನಗೆ ಹರಿತಂದು ತಮ್ಮಯ |
ತನುವನೀಡಾಡಿದರು ಬಳಿಕಾ ಪ್ರಭುವಿನಂಘ್ರಿಯಲಿ ||

ವನಿತೆಯರು ನಲಿವಿನಲಿ ಜಯ ಜಯ |
ವೆನುತ ಕರ ನಖ ನಯನಗಳ ಬೆಳ |
ಗನೆ ನಿವಾಳಿಸುತೆತ್ತುತಿರ್ದರು ಮಂಗಳಾರತಿಯ ||೧೬||

— ಚಾಮರಸ

# ಪರಿಚಯ

ಇಲ್ಲಿ ಆಯ್ದುಕೊಂಡ ಭಾಗವು ಉದ್ದಾಮಕವಿ ಚಾಮರಸನ 'ಪ್ರಭುಲಿಂಗಲೀಲೆ' ಯಲ್ಲಿಯ ಪ್ರಭುದೇವರು ಶೂನ್ಯ ಸಿಂಹಾಸನವನ್ನೇರಿದ ಗತಿ' ಎಂಬ ಸಂಧಿಯಲ್ಲಿಯದು-ಇರುವುದು. ಕರ್ನಾಟಕ ಸಾಹಿತ್ಯದಲ್ಲಿ ನಿರಂತರವಾಗಿ ಉಳಿಯಲು ಯೋಗ್ಯವಾದ ಶ್ರೇಷ್ಠತರಗತಿಯ ಕಾವ್ಯಗಳಲ್ಲಿ ಇದೊಂದು ಎಂದು ಹೇಳಬಹುದು. ಇಡೀ ಕಾವ್ಯವು ಭಾಮಿನೀ ಷಟ್ಪದಿಯಲ್ಲಿದೆ. ಷಟ್ಪದಿಯಲ್ಲಿ ಕಾವ್ಯಬರೆದು ಪ್ರಖ್ಯಾತರಾದ ರಾಘವಾಂಕ, ಕುಮಾರ ವ್ಯಾಸರ ಜೊತೆಗೆ ಇವರನ್ನು ಸೇರಿಸಲೇಬೇಕು

ಪ್ರಭುಲಿಂಗ ಲೀಲೆಯ ಶೈಲಿಯಲ್ಲಿ ಕಂಡುಬರುವ ಮುಖ್ಯ ಗುಣಗಳೆಂದರೆ ಸರಳತೆ ಮತ್ತು ಶ್ರವ್ಯತೆ. ಕ್ಲಿಷ್ಟವಾಗಿರುವ ಅಲಂಕಾರಗಳನ್ನು ಉಪಯೋಗಿಸಿ ಗ್ರಂಥವು ನೀರಸವಾಗುವಂತೆ ಮಾಡಿಲ್ಲ. ಸಹಜ ಸುಂದರವಾಗಿರುವ ಉಪಮೆ, ರೂಪಕ ಮೊದಲಾದ ಅರ್ಥಾಲಂಕಾರಗಳನ್ನು ಅವರು ಹೆಚ್ಚಾಗಿ ಉಪಯೋಗಿಸಿದ್ದಾರೆ. ಈ ಗ್ರಂಥದಲ್ಲಿ ಬರುವ ಆಧ್ಯಾತ್ಮಿಕ ವಿಷಯ ವಿವೇಚನೆಯನ್ನು ಸಹ ಬಹು ರಸವತ್ತಾಗಿ ಮಾಡಿದ್ದಾರೆ.

ಈ ಕವಿಯು ವಿಜಯನಗರದ ಪ್ರೌಢದೇವನ ಕಾಲದಲ್ಲಿ ಆತನ ಸಭೆಯಲ್ಲಿದ್ದನೆಂದು ಗೊತ್ತಾಗುವದು. ಪ್ರೌಢದೇವನು ಕ್ರಿ. ಶ. ೧೪೧೯ ರಿಂದ ೧೪೪೬ರ ವರೆಗೆ ಆಳಿದನು. ಆದುದರಿಂದ ಚಾಮರಸನು ೧೪೩೦ರ ಸುಮಾರಕ್ಕೆ ಇದ್ದಿರಬಹುದೆಂದು ಕವಿಚರಿತೆಕಾರರು ಹೇಳುತ್ತಾರೆ.

**ಅಭ್ಯಾಸ:—**

ಕೈವಾರಿಸು, ಸ್ತುತಿಸು; ಉಗ್ಘಡಣೆ, ಸಪ್ಪಳ;
ಕೈಕಂಬಿಕಾರ, ಕೈಯಲ್ಲಿ ದಂಡವನ್ನು ಹಿಡಿದವ;
ಗಡಿಬಿಡಿ, ಒಂದು ಬಗೆಯ ವಾದ್ಯ;

ಡೌರಿ, ಸನಾದಿಯ ಮಾದರಿಯ ವಾದ್ಯ;
ನಿಸ್ಸಳ (ನಿಸ್ಸಾಳ), ಭೇರಿ; ಸೀಗುರಿ, ಚೌರಿ; ಹೆಕ್ಕಳ, ಹೆಚ್ಚಳ;
ಸೊಹ, ಹೊದೆ;

## ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

**ಅಭ್ಯಾಸ:—**

೧ ಅಲ್ಲಮ ಪ್ರಭುವು ಯಾರು?

೨ ಪ್ರಭುದೇವರ ಕಪಟವೇಷವನ್ನು ವರ್ಣಿಸಿರಿ.

೩ ಈ ತರದ ವೇಷವನ್ನು ಪ್ರಭುದೇವರು ಏಕೆ ಧರಿಸಿದರು?

೪ ಮಂಗಳಾರತಿಯನ್ನು ಹಿಡಿದಿದ್ದ ಸ್ತ್ರೀಯರು ಹೇಗಿದ್ದರೆಂದು ಕವಿಯು ವರ್ಣಿಸಿದ್ದಾನೆ?

೫ ಬಸವ ದಂಡೇಶನು ಪ್ರಭುದೇವರನ್ನು ಕಾಣಲು ಯಾವ ಸಿದ್ಧತೆಯಿಂದ ಹೋದನೆಂಬುವದನ್ನು ಎರಡು ವಾಕ್ಯಾವಳಿಗಳಲ್ಲಿ ಬರೆಯಿರಿ.

## ೨. ಶ್ರೀರಾಮಚಂದ್ರನು ಹೊಮ್ಮೃಗ ಹಿಡಿಯಲು ಹೋದುದು.

ತಮ್ಮ ನೋಡೀ ಮೃಗವನಬುಜಜ |
ನಿರ್ಮಿಸಿದ ಸೃಷ್ಟಿಗೆ ನವೀನವಿ |
ದೆಮ್ಮರಸಿ ಬೇಡಿದಳು ಬಯಕೆಯ ಸಲಿಸಬೇಕೆಂದು ||

ಹೊಮ್ಮರಿಯೆಮಗಾಯ್ತೆಂದು ನಾವೀ |
ಹೆಮ್ಮರಿಯ ತಪ್ಪನ್ನ ಬರಲೀ |
ಧರ್ಮಪತ್ನಿಯ ಕಾದುಕೊಂಡಿರು ನೇಮ ನಿನಗೆಂದ ||೧||

ದಿಟಕೆ ಹೊಮ್ಮರಿಯಾದಡೆಯು ಕರ |
ಪುಟಕೆಯಡಗಿಸಿ ತಹೆನು ತಾನಿದು |
ಕುಟಿಲ ಕರ್ಬುರನಾದಡಿಳುಹುವೆನಿದರ ಮಸ್ತಕವ ||

ನಿಟಿಲದಲಿ ವಿಧಿ ಬರೆದ ಬರೆಹವ |
ನಟಮಟಿಸಲಿದರಳವೆ ಕಾದಿರು |
ಕುಟಿಲಕುಂತಳಭರೆಯನೆನುತಡಿಯಿಟ್ಟನಾ ರಾಮ ||೨||

ಕಂಡುದಾ ಕಡುಕಪಟ ಮೃಗ ಕೋ |
ದಂಡರಾಮನ ಮನದ ನೆನಹಿನ |
ಧಂಡಿಶರವನು ದಾರಿದೆಗೆದುದು ಘೋರ ವಿಪಿನದಲಿ ||

ಕೊಂಡು ಮೋಹಕ ಬುದ್ಧಿಲತೆ ಕುಡಿ ॥
ಗೊಂಡುದರಸನ ಬಳಿಕ ಕಪಟ ಕ ।
ರಂಡ ಮೃಗ ಕಡುಚಿತ್ರಗತಿಯಲಿ ಚಿಮ್ಮುತಿದಿರಿನಲಿ ॥೩॥

ಅಡಿಗಡಿಗೆ ಮುಂಚುವುದು ನಿಲವಿನಲಿ ।
ಗತಿಗೆ ನಿಲುವುದು ಮುರಿಯೆ ಮರುವುದು ।
ಪ್ರದನಿಗೆ ದನಿದೋರುವುದು ಲಂಘಿಪಡೆ ಲಂಘಿಪುದು ॥

ಯತಿಗೆ ಸಾಧನ ಪದಮಳ ಜ್ಞಾ ।
ನತೆಗೆ ನಿಗುರ್ವವೋಲೊಡನೆ ನಿಗುರುವು ।
ದತುಳ ಮಾಯಾಮಹಿಮ ಮಾರೀಚ ಪ್ರತಾಪ ಮೃಗ ॥೪॥

ಮುಗಿದು ಮುಂಗಾಲುಗಳ ಹಿಂದಕೆ ।
ಹೊಗುವ ಹಿಂಗಾಲುಗಳ ಮುರುವಿನ ।
ಮೊಗದ ಚದುರಿನ ಬಳಿಯ ನೋಟದ ನೀಳ್ದ ಕರ್ಣಗಳ ॥

ಮುಗುಹಿದಪ್ಪಲು ಮುಂಚೆ ಚಿಮ್ಮುವ ।
ಬಿಗಿವ ಚಲನೆಯ ಜಂಗುವಾರಿನ ।
ಮೃಗವು ಮುನಿ ನಿಕುರುಂಬದೊಳಗಡ ಹಾಯ್ದುದಗಲದಲಿ ॥೫॥

ಇದೆ ಇದೆಂಬಂತೊಡನೆ ಹಿಡಿ ಹಿಂ ।
ದೊದಗುವುದು ಬರಲಾಸೆಯಲಿ ಬಿಸಿ ।
ಲುದಕ ವೋಲತಿಮಿಂಚುವುದು ಕೈ ಸೋಕಿಗವನಿಪನ ॥

ಚದುರತನವನು ಮಿಕ್ಕಿಹುದು ಸದು ।
ಹೃದಯನನು ವಂಚಿಸುವ ಮಾಯಾ ।
ವಿದನವೊಲು ಮೈದೋರಿ ತೋರದೆ ಹಾಯ್ಡುದಗಲದಲಿ ॥೬॥

ಇಡಕರಲಿ ಕುತ್ತುರಲಿ ಕುಹರದ ।
ತೊಡಕು ಮೆಳೆಗಳಲದ್ರಿ ಕೂಟದ ।
ಎಡಬಲದ ತಪ್ಪಲಲಿ ತುರುಗಿದ ತರು ಕದಂಬದಲಿ ॥

ಅಡಗಿ ತೋರುತ ನಿಲುತ ನಿಗುರುತ ।
ತೊಡಹವಳಿಮನದಧಮಪುರುಷರ ।
ನುಡಿಯವೊಲು ವಂಚಿಸುತ ಹಾಯ್ದುದು ವಿಪಿನದಲಿ ನೃಪನ ॥೭॥

ದಾರಿಯಿದು ದರಿಯಿದು ಮಹಾಕಾಂ ।
ತಾರವಿದು ಕಲುಮರವಿದದ್ಭುತ ।
ಘೋರದುರ್ಗವಿದುಗ್ರಕಂಟಕ ಕಠಿಣ ಪಥವೆಂಬ ॥

ಆರಯಿಕೆಯಿಲ್ಲದ ಮೃಗವ್ಯಾ ।
ಪಾರಚಿತ್ತನು ಶಾಂತಗುಣ ಗಂ ।
ಭೀರಗರ್ವಿತನೈದಿದನು ಮಾಯಾಕುರಂಗಮವ ॥೮॥

ಲಾಗುಹಂಗದೆ ಕಂಗಳಿಗೆ ಮರೆ ।
ಯಾಗದಾವಾತಾಯುವಿನ ವೈ ।
ಲಾಗು ಲಂಘನೆಗೊಡಲಲಂಘಿಸುತಂಘವಣೆ ವಿಗಿಲು ॥

ಮೇಗೆ ಮೇಗುಬ್ಬೇಳ್ವಕುಯಿಲಿನ ।
ತಾಗುವಳ್ಳಿಯ ತೋದ ಬೆಮರಿನ ।
ಜಾಗುಗಳ ನಿಡುಮರನಮರೆಗಳಲಟ್ಟಿದನು ಮೃಗವ ॥೯॥

ಚಿಗಿಯಲಂಬರ ಹೊಂಬಿಸಿಲದೆನೆ ।
ಉಗುಳುವುದು ನೆಲಕಿಳಿಯಲಂಬರ ।
ವಗಲದಲಿ ಹೊಂಬಣ್ಣವಹುದಾಮೃಗದ ಕಾಂತಿಯಲ್ಲಿ

ಬಗೆಯೊ ನಿಶ್ವಾಸದಲಿ ದಶದಿ ।
ಕ್ಕುಗಳು ಪರಿಮಳಿಸುವುದು ಸೊಬಗಿನ ।
ಸೊಗಸ ಬೀರುತ ಬೀದಿವರಿದುದು ಬನದೊಳಗಲದಲಿ ॥೨೦॥

ಆಸೆಬಿಡದಟ್ಟಿದನು ಮತ್ತೆ ಮ ।
ಹೀಶ ಮಾರುತ ವೇಗದಲಿ ಮಾ ।
ಯಾಸುರದ ಮೃಗ ಘನಮನೋವೇಗದಲಿ ಸರಳಿಸಿತು ॥

ಘಾಸಿಯಾದನು ಭೂಪ ಬಹಳ ।
ಶ್ವಾಸಲಹರಿಯ ಲಳಿಯ ತಾಳಿಗೆ ।
ಯಾಸರಿನ ಸರಣಿಶ್ರಮದ ಭಾರಣೆಯ ಬಿಗುಹಿನಲಿ ॥೨೧॥

ಬಿಸಿಲು ಬೇಗಕೆ ಬೆಂದು ಕಂದಿದ ।
ಮುಸುಡು ಮಸುಳಿಸಿದಂಗರೋಚಿಯ ।
ಮುಸುಕೆ ಕೆಂಪಿನ ಲೋಚನದ ನಿದ್ರ್ರವದ ನಾಲಗೆಯ ॥

ಉಸುರಿಗುಬ್ಬಸವೆಡಹುವೆರಳಿನ ।
ಕುಸಿದ ಗಮನದ ಗಳಿತ ಸಾಹಸ ।
ದಸಮ ವೀರರ ದೇವ ಧೈರ್ಯವಿಸಂಚಮನನಾದ ॥೨೨॥

ಅಡಿಗಡಿಗೆಹಸಿದವುಕಿದವು ನೀ ।
ರಡಿಕೆ ನಿರ್ಬಂಧಿಸಿತು ಸಾಗಿದ ।
ರೊಡನೆ ಬಳಲಿಕೆಯೆಂಬ ಬಗೆ ಬಲುಕರಿಸಿತವನಿಪನ ॥

ಸುಡು ವೃಥಾ ಪೌರುಷವನಕಟಾ ।
ಬಡ ಕುರಂಗಾಧಮವು ಸಾಹಸ ।
ತಡೆದುದೇ ತನ್ನದನೆನುತಸಾರ್ದನು ವನಸ್ಪತಿಯ ॥೨೩॥

ಎಳೆದಳಿರ ಸೊಂಪಿನಲಿ ಕುಸುಮದ |
ಕಳಿಕೆಗಳ ಹಂಪಿನಲಿ ಘನಪರಿ |
ಮಳದ ಪಸರಿನ ತಂಪಿನಲಿ ತಂಬೆಲರ ಕಂಪಿನಲಿ ||

ಚರಿತ ಸಹಸಾಕಾರ ಸಾರದ |
ಸುಲಭತೆಯನರಸಂಗೆ ಬಿಲು ಬಿಲು |
ಗೊನೆಗೆ ಗಲ್ಲವನೂರಿ ನಿಂದೀಕ್ಷಿಸಿದನಾಮೃಗವ ||೧೪||

ಬಳಲಿದನು ಬಲುಹಾಗಿ ಸಾಕಿ |
ನ್ನೆಳತಟವು ತನಗೆಂಬ ಬಗೆಮುಂ |
ಗೊಳಿಸಿದುದು ಮುಂಬರಿದುದುಗ್ರಾಟೋಪ ಕೋಪಶಿಖಿ ||

ಸೆಳೆದನಿಷುಧಿಯು ಲಂಬ ತಿರುವಿಗೆ |
ತುಳುಕಿ ಕೋಲನು ಕೋಡಕೈಯಿಂ |
ದಳಲಿ ಸೂಯ್ಯನೆ ಸಿಲುಕಿದನು ನಿಲುಕಿದ ಶರೀರದಲಿ ||೧೫||

ಸಾರೆ ತನಗಿನ್ನ ಸುರಭವಸಂ |
ಸಾರ ಸುಖವೆಂದವನು ಜನ್ಮೋ |
ತ್ತಾರಕನ ರಮಣೀಯತರ ರಾಮಾಭಿಧಾನಕದ ||

ಸಾರತರ ಜಿಹ್ವಾಗ್ರದಿಂದು |
ಚ್ಚಾರಿಸುವ ಸಮಯದಲಿ
ಕೂರಲಗು ಕಡಿದಿಳುಹಿತಾ ಮಾರೀಚ ಮಸ್ತಕವ ||೧೬||

— ಕುಮಾರ ವಾಲ್ಮೀಕಿ

# ಪರಿಚಯ

ಕುಮಾರವ್ಯಾಸನ ಭಾರತಕ್ಕೆ ಗದುಗಿನ ಭಾರತವೆನ್ನುವಂತೆ ಈ ಕವಿಯ ರಾಮಾಯಣಕ್ಕೆ ತೊರವೆಯ ರಾಮಾಯಣವೆನ್ನುವರು. ಆತನು ಕುಮಾರವ್ಯಾಸನೆಂದು ಹೆಸರಿಟ್ಟುಕೊಂಡಂತೆ ಈತನು ಕುಮಾರ ವಾಲ್ಮೀಕಿಯೆಂದು ಇಟ್ಟುಕೊಂಡಿದ್ದಾನೆ ಯಾಕಂದರೆ ಮೂಲ ರಾಮಾಯಣವನ್ನು ಸಂಸ್ಕೃತದಲ್ಲಿ ಬರೆದ ಕವಿಯು ವಾಲ್ಮೀಕಿ ಮಹರ್ಷಿಯು. ತೊರವೆಯ ರಾಮಾಯಣದ ಕವಿಯ ಹೆಸರು ನರಹರಿಯೆಂದು. ಇವನ ಕಾಲ ಕ್ರಿ. ಶ. ಸುಮಾರು ೧೫೦೦. ವಿಜಾಪುರದ ಹತ್ತಿರದ ತೊರವೆಯ ಗ್ರಾಮದಲ್ಲಿರುವ ನರಸಿಂಹ ದೇವರ ವರಪ್ರಸಾದದಿಂದ ಕಾವ್ಯವನ್ನು ಬರೆದಿದ್ದಾನೆ.

ಈ ಕವಿಯು ಕುಮಾರವ್ಯಾಸನನ್ನು ತುಂಬಾ ಹೊಗಳಿದ್ದಾನೆ. ಮತ್ತು ಅವನ ಜೊತೆಗೆ ನಿಲ್ಲುವ ಕವಿಯು ತಾನೊಬ್ಬನೇ ಎಂದು "ಸರಸ ವರ್ಣಕಕವಿಗಳೊಳು ಭಾ। ಸುರ ಕುಮಾರವ್ಯಾಸನೊಬ್ಬನು। ಪರಿಕಿಸ ವೊಡಾನೊಬ್ಬ ಮಿಕ್ಕಿನ ಬರಡು ಕವಿಗಳ ಲೆಕ್ಕಿಸುವನೆ ಕುಮಾರ ವಾಲ್ಮೀಕಿ" ಎಂಬ ಮಾತುಗಳಲ್ಲಿ ಹೇಳುತ್ತಾನೆ. ಈ ಕವಿಯ ಶೈಲಿಯು ನಡುಗನ್ನಡದ ಸ್ಥಿತಿಯನ್ನು ಚನ್ನಾಗಿ ತೋರಿಸುತ್ತದೆ. ಅಲ್ಲಲ್ಲಿ ಬರುವ ವರ್ಣನೆಗಳೂ ಕಥೆ ಹೇಳುವ ರೀತಿಯೂ ಅವನ ಪ್ರತಿಭೆಗೆ ಸಾಕ್ಷಿಯಾಗಿವೆ. "ಇವನು ಬರೆದ ತೊರವೆಯ ರಾಮಾಯಣ"ವು ಭಾಮಿನಿ ಷಟ್ಪದಿಯಲ್ಲಿದೆ. ಇಲ್ಲಿ ಆಯ್ದುಕೊಂಡ ಭಾಗವು **ಅರಣ್ಯಕಾಂಡದಲ್ಲಿಯ** ಎಂಟನೆಯ ಸಂಧಿಯಲ್ಲಿಯದು.

**ಟಿಪ್ಪಣಿಗಳು:—**

ಹೊಮ್ಮು, ಆಶೆ; ಕರ್ಬುರ, ರಾಕ್ಷಸ; ಸಿಟಿಲ, ಹಣೆ; ಅಟಮು ಮಟಿಸು, ಮೀರು; ಲಂಘಿಸು, ಜಿಗಿ; ಕುತ್ತುರ, ಗಿಡಗಂಟಿ; ಕುಹರ,

ಗಿರಿಯ ಗುಹೆ; ಲಾಗು, ಹಿಡಿಯುವಿಕೆ; ವಾತಾಯು, ಚಿಗರಿ; ಅಂಥ ಪಣೆ, ಶಕ್ತಿ; ಸರಣಿಕ್ರಮ, ದಾರಿಯ ದಣಿವು; ( ಸರಣಿ, ದಾರಿ; ) [illegible], ಮೊಗ್ಗ; ಹಂಬ:, ಗೊಂಚಲು.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ:—**

(೧) ರಾಮಚಂದ್ರನು ಲಕ್ಷ್ಮಣನಿಗೆ ಏನೆಂದು ಹೇಳಿ ಹೊರಟನು?

(೨) ಹೊಮ್ಮೃಗವು ರಾಮಚಂದ್ರನ ಮುಂದೆ ಹೇಗೆ ಸುಳಿದಾಡಿತು?

(೩) ರಾಮಚಂದ್ರನು ಮೃಗದ ಬೆನ್ನು ಹತ್ತಿ ಎಲ್ಲಿ ಎಲ್ಲಿ ಹೋದನು?

(೪) ರಾಮಚಂದ್ರನನ್ನು ಆ ಚಿಗರಿಯು ಹೇಗೆ ವಂಚಿಸುತ್ತಿತ್ತು?

(೫) ಬನದಲ್ಲಿ ಆ ಚಿಗರೆಯು ಜಿಗಿದಾಡುವಾಗ ಅದು ಯಾವ ಸೊಬಗನ್ನು ಸೂರೆಮಾಡಿತೆಂದು ಕವಿಯು ಹೇಳುತ್ತಾನೆ?

(೬) ಮೃಗದ ಬೆನ್ನು ಹತ್ತಿ ಹೊರಟು ಬಳಲಿದ ರಾಮಚಂದ್ರನನ್ನು ನಿಮ್ಮ ಶಬ್ದಗಳಲ್ಲಿ ಚಿತ್ರಿಸಿರಿ.

(೭) ಇಲ್ಲಿಯ ಹೊಮ್ಮೃಗದ ವರ್ಣನೆಯನ್ನು ಸುಂದರವಾದ ಗದ್ಯದಲ್ಲಿ ಬರೆಯಿರಿ.



# ೪. ಅಂಧಕಾಸುರನ ಸಂಹಾರ

ಘನಮಹಿಮ ಚೆನ್ನಬಸವಣ್ಣ ನೀಂ ಮುಂಗಥೆಯ ।
ಸುನಯದಿ ಪೇಳೆನಲ್ ಸಿದ್ಧರಾಮೇಶಂಗೆ ।
ನಯದಿಂ ಪೇಳ್ದನಾ ಸಮಯದೊಳಗಿನನಪರವಾರ್ಧಿಗಿಳಿದಂ
ಭರದೊಳು ॥

ನೆನೆದು ರಣಭಂಗಮಂ ಸಕಲ ದೈತ್ಯರ್ ತಮ್ಮ ।
ಮನದಹಂಕೃತಮಳಿದು ದುಃಖದಿಂ ನೋವುತಿ ।
ರ್ಪಿನಮಂಧಕಾಸುರಂ ಕರೆಸಿದಂ ದೊರೆದೊರೆಗಳಂ
ಮಂತ್ರಣಂ ಗೆಯ್ಯಲು ॥೧॥

ಚಿಂತೆಯೇತಕ್ಕಿಂತಮುಂತಮಿವು ಸಮರದೊಳ ।
ಗೆಂತಪ್ಪವರ್ಗ್ಗಾದೊಡಂ ಬರ್ಪುವೀ ವೃಥಾ ।
ಭ್ರಾಂತಿ ಬೇಡೆಂದೆಲ್ಲರಂ ಕಳಿಪಿ ತನ್ನಾಪ್ತರಂ ಕರೆದು ವಿನಯದಿಂದೆ॥

ಪಿಂತಾದ ಕಾಳೆಗದೊಳೆಮ್ಮೀ ಜಯಾಪಜಯ ।
ಮಂತಿಕ್ಕೆ ಬಹುಕಾಲಮಾಯ್ತು ರಣಮಾ ಪಗೆಯ ।
ನೆಂತು ಸಂಹರಿಸವೇಳ್ಕೆಂಬುದಂ ತಿಳಿದೆಮಗೆ ಪೇಳಿರೈ
ನೀವೆಂದನು ॥೩॥

ಆ ಮಾತನೆಲ್ಲರುಂ ಕೇಳ್ದು ಮೌನಂದಾಳ್ದು ।
ತಾಮೋರ್ವರೋರ್ವರ ಮೊಗಂ ನೋಡುತಿರೆ ಮಹಾ ।
ಭೀಮಾಂಗನಾ ಗಗನಮೂರ್ಧ್ನಿಯಂಧಾಸುರನ ಸಮ್ಮುಖದೊಳೆಳ್ದು
ನಿಂದು ॥

ಈ ಮಹಾಸಭೆಯ ವೀರರ್ಕಳಿರೆ ರಿಪುವಂ ವಿ
ರಾಮವೆನಿಪುದು ನಿಮಗೆ ಚೋದ್ಯ ಮಲ್ಲಾದೊಡೆ ।
ನ್ನೀ ಮನಕೆ ತೋರಿದುದನುಸಿರ್ದಿರ್ಪ್ಪೆನದಂ ಕೇಳಿಮೆಂದು
ಮತ್ತಿಂತೆಂದನು ||೩||

ಆದು ಮೊದಲಾಗಿ ಪಗಲಿನ ಸಮರದಿಂದೆಮಗೆ ।
ಬಂದುದಪಜಯಮಾವ್ ನಿಶಾಚರರ್ ನೋಡಲದ ।
ರಿಂದಿರುಳ್ಗಳಿಗಂ ಜಯಮಪ್ಪುದೆಮಗೆ ನಮ್ಮೀ ಸರ್ವಶಕ್ತಿವೆರಸಿ ||

ಇಂದು ಜಯಸಿದ ಗೆಲ್ಲದೊಳ್ ಮೆಯ್ಗಳಂ ಮರೆದು ।
ಸಂದ ಗರ್ವದೊಳೊರಂಗಿದ ಸಕಲ ದೇವತಾ ।
ವೃಂದಮಂ ಕೊಲಲಕ್ಕುಮಿದು ನಿಶ್ಚಯಂ ಮನಕೆ
ಬರ್ಪ್ಪೊಡೆಸಗುವದೆಂದನು ||೪||

ಸಹಜಮೆಂದಂ ಶಂಭನೊಪ್ಪಿದಂ ಶರಭನದ ।
ನಹುದೆಂದನಂಧಕಾಸುರನುಳಿದರೆಲ್ಲರುಂ ।
ವಹಿಸಿಕೊಂಡರ್ ಗಗನಮೂರ್ಧ್ನಿ ಮತಮೇ ತಮ್ಮ ಮತಮೆಂದು
ತತ್ ಕ್ಷಣದೊಳು ||

ಗಹಗಹಿಸಿದಂ ಪ್ರಹಲ್ಲಾದನರಿದರಿದು ಮರು ।
ಳಹರನುರೆ ಕಂಡು ಕಂಡುಂ ಕಾಣದಿರ್ಪ್ಪ ದು ।
ರ್ಮಹಿಪಸ್ವರೂಪರಂ ತಿಳಿಪಲೀಶಂ ವಶ ಮಲ್ಲಮೆಂದಿಂತೆಂದನು||೫||

ಶತಮಾಯು ಜಂಭ ಬಲ ನಮುಚಿ ವೃತ್ರರ್ಗೆ ಮುಂ ।
ಪ್ರತಿಮಾನರುಂಟೆ ಸಮರದೊಳವರ್ ಮೊದಲಾದ ।
ರತಿಮಾನವುಡಗಿ ಮಡಿದರ್ ಸತ್ತ [illegible]ಕೆ ಕಡೆಗಾಣೆನೀ
ರಕ್ಕಸರೊಳು ||

ಕ್ಷತಮಾಗದವರದಾರ್ ತೋರಹಿತಬಲದೊಳಗೆ ।
ಹತಮಾದರಾರೆಣಿಸು ಬೇಗ ಶಿವನಡಿಗಳ್ಗೆ ।
ನತಮಾಗು ಮರುಳ್ವರಂ ನಂಬಿ ಕೆಡಬೇಡ ಪೇಳ್ದಂ
ಶ್ರಿವಚನದೊಳೆಂದನು ||೬||

ಎನೆ ಕೇಳ್ದು ಗುಡುಗುಡಿಸಿ ಕಣ್ಗಳೊಳ್ ಕಿಡಿಗೆದರಿ ।
ಕನಲುತಂಧಾಸುರಂ ನುಡಿದನಿವನಂತೆ ಯೋ ।
ಚನೆಗೆ ಕರೆದಿವೆ ನಿನ್ನನಂಚಬೇಡೆಂದು ಪ್ರಹಲ್ಲಾದನಂ ಜರೆದು
ನುಡಿದು ||

ದನುಜ ಸೇನಾಪತಿತ್ವಕೆ ಗಗನಮೂರ್ಧ್ನಿಗುರಿ ।
ಮನಮೊಲಿದು ಮೂರ್ಧ್ನಾಭಿಷೇಚನಂ ಗೆಯ್ದೀಗ ।
ನೆನೆದ ಕಾರ್ಯಮನೆಸಗಿಯೆಂದು ವೀಳೆಯವನಿತ್ತು ಕಗ್ಗೊಲೆಗೆ
ಬೀಳ್ಕೊಟ್ಟನು||೭||

ಕರಿಯ ಘಂಟೆಗಳ ಕುದುರೆಗಳ ನಾಲಗೆಗಳಂ ।
ಸರಮುಣ್ಮದೋಲ್ ಕಟ್ಟಿ ಪಂಜುವೊತ್ತಿಸದೆ ಪರಿ ।
ಪರಿಯ ವಾದ್ಯಂಗಳಂ ಬಾಜಿಸದೆ ಗುಪ್ತದಿಂ ಸರ್ವ ಸನ್ನಾಹವಾಗಿ||

ದೊರೆ ದೊರೆಗಳೇ ಹೊಣೆ ಹೊಕ್ಕಂದಿನಲ್ಲಿ ತಮ ।
ಗೆರಡರೊಳಗೊಂದಾಗವೇಳ್ಕೆಂದು ಬಂದು ಪುರ- ।
ಹೆರನ ಪಾಳೆಯದ ಸುತ್ತೆತ್ತಲುಂ ಮೋಹರಸಿ ನಿಂದರೀ
ವರ್ಣಿಸುವೆನು ||೮||

ಆಳ ಕಾಲ್ಪಿಡಿದು, ಭಟರಂ ಬಡಿದು, ಕುದುರೆಗಳ ।
ಬಾಲಮಂ ಪಿಡಿದು ತೇಜಿಗಳನಪ್ಪಳಿಸಿ, ಶುಂ ।
ಡಾಲಂಗಳಂ ಪಿಡಿದು ಕರಿಗಳಂ ಸದೆದು ತೇರಿಂದಂ ವರೂಥಂಗಳ ।

ಸಾಲನಡಿಹುಡಿಮಾಡಿ, ಭಂಡಾರ ಬೊಕ್ಕಸದ ।
ಶಾಲೆಗಳನುರೆ ಸೂರೆಮಾಡಿ ಪಲ ತೆರದೊಳಾ ।
ಕಾಳರಕ್ಕಸರಟ್ಟಿ ಮುಟ್ಟಿ ಕೊಲ ತಿರ್ದ್ದರೇನೆಂಬೆನಚ್ಚರಿಯನು ॥೯॥

ಮದಗಜಂಗಳ್ಗೆ ಪಲ್ಲಣಗಳಂ ಹಾಯ್ಕು, ಬಲು ।
ಗುದುರೆಗಳ ಬೆಂಗೆ ರಂಚಿಕೆಯನೊಂದಿಸು, ಕೆಯ್ಯ ।
ಮೊದಲೊಳಿಡು, ವಜ್ರಾಂಗಿಯಂ ಮೆಯ್ಗೆ ತೊಡಿಸು,
ಸೂಳಾಯ್ತುಮಂ ಕಾಳೆಯಿಂದೆ ॥

ಬೆದರದಿರಿ ನೇಜೆಯಂಗಳನೂರು ಹರಿಗೆಯಂ ।
ಕದಲಿಸು, ವರೂಥಮಂ ತೊಡೆ, ಚಾಟುಗೊಳ್ಳೆನುತೆ, ।
ಕದನವಿಕ್ರಮರೆಲ್ಲರುಂ ಬೆದರಿ ಕಂಡ ಕಡೆಗೋಡಿದರ
ದೇನೆಂಬೆನು ॥೧೦॥

ಬರಿಯ ಮೆಯ್ಗಳ ಬಿಟ್ಟ ಮಂಡೆಗಳ ಬಾಳ್ವಿಸ. ।
ಟ್ಟೊರೆವಿಡಿದ ಕೆಯ್ದುಗಳ ಜಗುಳಿ ತಬ್ಬಿಬ್ಬಾಗಿ ।
ಮೆರೆವಂಗರಕ್ಷೆಗಳ ವಾಹನಂಗಳ ರಕ್ಕಸರ್ ಕಂಡ ಕಡೆಗಳಲ್ಲಿ ॥

ಇರಿದ ಘಾಯಂಗಳಿಂ ಹೆಜ್ಜೆ ಹೆಜ್ಜೆಗೆ ಬಿಡದೆ ।
ಕರೆವ ನೆತ್ತರ ಶಿವಾ ಸಲಹು ಸಲಹೆಂದೆಂಬ ।
ಮೊರೆಯ ಬಾಯ್ಗಳ ದಿವಿಜ ನಿಕರವಂ ಕಂಡು ರುದ್ರಪ್ರಮಥಗಣ
ಮೆಳ್ದುದು ॥೧೧॥

ವೀರಭದ್ರಂ ಕಾರ್ತಿಕೇಯನುರುತರ ಕಾಲ ।
ಭೈರವಂ ನಂದೀಶ್ವರಂ ಮಹಾಕಾಳನಂ ।
ಗಾರವದನಂ ಘೂಮಕಾಯಂ ವಿರೂಪಾಕ್ಷನದ್ರಿಭೇದನನೊಪ್ಪುವ॥

ಸೂರೇಂದುಪಾತ ಘಂಟಾಕರ್ಣ ಬಡಬಾಗ್ನಿ ।
ದಾರ ಸುರಪೋಷ ಚಂಡೇಶ ಮುಖ್ಯರ್ ಸ್ವಪರಿ ।
ವಾರ ಸಹಮಾರ್ಭಟಿಸುತೆಳ್ದರೊಂದೇಬಾರಿ ರಾಮ
ಕೇಳದ್ಭುತವನು ॥೧೦॥

ಕರವಾಳ್ಗಳಂ ಜಡಿದು ನೂಂಕುವರ್ ತಾಂಕುವರ್ ।
ಕರಿ ಕರಿದು ಪಗೆಗಳಂ ಮುತ್ತುವರ್ ಕುತ್ತುವರ್ ।
ತರತರದ ಪೆಣಗಳಂ ಮೆಟ್ಟುವರ್ ಕುಟ್ಟುವರ್ ಕಲಿಗಳಂ
ದೈತ್ಯಭಟರ ॥

ಮೊರೆವ ವಾದ್ಯಧ್ವನಿಗೆ ಹಿಗ್ಗುವರ್ ಮುಗ್ಗುವರ್ ।
ಕರದಿಂದೆ ಮುಂದಲೆಗೆ ತುಡುಕುವರ್ ಮಿಡುಕುವರ್ ।
ಮರಳಿ ಪಜ್ಜೆಯನಿಡದೆ ಕಾದುವರ್ ಮೋದುವರ್ ಶಿವಬಲದ
ವೀರಭಟರು ॥೧೨॥

ವೀರಭದ್ರನ ಬಲದ ಬಿರುಬು, ಷಣ್ಮುಖನಪರಿ ।
ವಾರದಟ್ಟುಳಿ ಗಣೇಶನ ಸೈನ್ಯದುರುಬೆಯಾ ।
ಭೈರವನ ಸೈನಿಕರ ಕೋಳಾಹಳಂ, ದಂಡಧರನ ಸೇನಾಕರ್ಕಶಂ ॥

ವೀರಕಂಕಾಳಧರವಾಹಿನಿಯ ವಿಕ್ರಮಂ, ।
ಸೂರೇಂದುಪಾತರಾ ಪಡೆಯ ಬಿರುಬಂ, ತಡೆಯ ।
ದಾ ರಾಕ್ಷಸ ಪ್ರತಾನಂ ತಾಯ್ಗೆ ಮಕ್ಕಳಾಗದೆ ಕೂಡೆ
ಬೆಂಗೊಟ್ಟುದು ॥೧೪॥

ಅರಿಯದಿರ್ಪಂಧಕಾಸುರನೊಡನೆ ಹುಸಿಯನೆ ।
ಚ್ಚರಿಸಿ ಕಗ್ಗೊಲೆಗೆ ಚಾಚಿದ ಗಗನಮೂರ್ಧ್ನಿಯಂ ।
ತರಿದಕಟ ಗಗನಮೂರ್ಧ್ನಿಯ ಮಾಡಬೇಡವೇ
ಶಿವಭಟರೆಂದೆನ:ತ್ರಿ ॥

ವೊರೆಯಿಟ್ಟು ಬಾಯ್ಬಿಟ್ಟು ಮರವಟ್ಟು ।
ಕರಕರನೆ ಕಂದಿ ಧೃತಿಗುಂದಿ ಭೀತಿಯೊಳೊಂದಿ ।
ಪೆರೆತಿಗೆವರಂ ಕಂಡು ಬೆಂಬತ್ತಿ ಸುತ್ತಿ ಮುತ್ತಿರಿದರದ
ನೇನೆಂಬೆನು ॥೧೫॥

ಇತ್ತಲಂಧಾಸುರನ ಪಾಳಯದೊಳಸುರರಂ ।
ತತ್ತರಿಂದರಿವುತ್ತೆ ವೀರ ಗುಹರ್ಕ್ಯತರ ।
ಲ್ಯತ್ತಲಾ ಖಳರಾಜನೆಚ್ಚತ್ತು ವೀರಭದ್ರನನರಸುತತಿ ಭರದೊಳು ॥

ಚಿತ್ತಜಾರಿಯು ಸಮ್ಮುಖಕ್ಕಾಗಿ ನಡೆತರಲ್ ।
ತೆತ್ತು ದಾಹವಮೀಶನೊಡನೆ ಕೂರಂಬುಗಳ ।
ಕಿತ್ತು ಕಿವಿವರೆಗುಗಿದು ಕರೆದನಾಕಾಶಮೆಲ್ಲಂ
ಬಾಣಮಯವಾಗಲು ॥೧೬॥

ಗಗನಮಂ ತುಂಬಿದಂಧಾಸುರನ ಬಾಣಮಂ ।
ನಗೆಮೊಗದೊಳೀಕ್ಷಿಸುತ್ತಭವಂ ಪಿನಾಕಮಂ ।
ನೆಗಪಿ ಜೇವೊಡೆದೊಂದು ಬಾಣಮಂ ಪೂಡಿ ತೆಗೆದೆಸಲಾಕ್ಷಣ
ನೋಡಲು ॥

ಅಗಲದೊಳ್ ಪುದಿದಂಬುಗಳ್ ತುಂಡುತುಂಡಾಗಿ ।
ಪೊಗುತಿರ್ದವವನಿಯೊಳಗಂಧಾಸುರಂ ಕಂಡು ।
ಮಗುಳಿ ಕೋಟಾನುಕೋಟಿಯ ಮಾರ್ಗಣಂಗಳಂ ತುಳ್ಕಿದಂ
ಬೇಗದಿಂದೆ ॥೧೭॥

ಚಂಡವಿಕ್ರಮನತುಳ ಕೋಪದಿಂದಂ ಹಲಗೆ .
ಖಂಡೆಯಂಗಳನಾಂತು ಪೊಯ್ವೆನೆಂದುಬ್ಬಿನಿಂ ।
ಖಂಡ ಪರಶುವನಿರದೆ ಮೇಲ್ವಾಯಲಭವಂ ತ್ರಿಶೂಲದಿಂದಿರಿದು
ಛಳಕ ॥

ಅಂಡಲೆವುತಾಕಾಶಕೆತ್ತಲಾ ಖಳನ ಮೆ ।
ಯ್ಯುಂಡ ರಕ್ತಂ ನಿಮಿಷಮಾತ್ರದೊಳ್ ಭೂತಳಕೆ । .
ಹಿಂಡಿ ಹಿಳಿದಂತೆ ಕರೆಯಲ್ ವಿಗತಮದನಾಗಿ ಕೊಂಡಾಡಿದಂ
ಶಿವನನು ॥೧೮॥

ಜಯ ಸಕಲ ಗುಣಧಾಮ, ಜಯ ಸಜ್ಜನ ಪ್ರೇಮ, ।
ಜಯ ದಿವಿಜನುತ ಚರಣ, ಭುಜಂಗಾಭರಣ ।
ಜಯ ಹುತಾಶನ ನೇತ್ರ, ಜಯ ಮನೋಹರ ಗಾತ್ರ, ಜಯಭೀಮ
ವಿಧೃತಸೋಮ ।'

ಜಯ ದನುಜ ಲಯಕಾಲ, ಜಯ ಸಕಲ ಜನಪಾಲ ।
ಜಯ ವಿಜಿತಸಮವರ್ತಿ ಜಯಚಾರುತರ ಕೀರ್ತಿ ।
ಜಯ ದಕ್ಷ ಮುಖ ಶಿಕ್ಷ, ಜಯ ಜಯ ವಿರೂಪಾಕ್ಷ
ಸಲಹೆಂದನಸುರೇಂದ್ರನು ॥೧೯॥

— ವಿರೂಪಾಕ್ಷ ಪಂಡಿತ



# ಪರಿಚಯ.

ಜೈಮಿನಿ ಭಾರತದಂತೆ ಅತ್ಯಂತ ಪ್ರಚಾರವಾದ ಸುಂದರ ಕಾವ್ಯವೆಂದರೆ 'ಚನ್ನಬಸವ ಪುರಾಣ' ವೆಂದೇ ಹೇಳಬಹುದು. ಒಂದು ವಿಷ್ಣುಭಕ್ತಿಯನ್ನು ನಿರೂಪಿಸಲು ಹೊರಟ ಕಾವ್ಯವಾದರೆ ಇನ್ನೊಂದು ಶಿವಭಕ್ತಿಯನ್ನು ನಿರೂಪಿಸಲು ಹೊರಟಿದೆ. ಕಥೆಗಳಿಂದಲೂ, ಉಪಕಥೆಗಳಿಂದಲೂ, ವರ್ಣನೆಗಳಿಂದಲೂ ಈ ಮಹಾಕಾವ್ಯವು ತುಂಬಿಹೋಗಿದೆ. ಅಲಂಕಾರಗಳ ಸೊಗಸೂ, ಕಥಾನಿರೂಪಣೆಯ ಕೌಶಲವೂ, ಭಾಷೆಯ ಪ್ರೌಢಿಮೆಯೂ ಹೃದಯಂಗಮವಾಗಿವೆ ಪಂಡಿತ ಪಾಮರರಿಬ್ಬರಿಗೂ ಹೃದ್ಯನಾಗಿರುವುದಲ್ಲದೆ ಸನ್ಮಾರ್ಗದರ್ಶಿಯಾಗಿದೆ.

ಕಾವ್ಯಕರ್ತೃವಾದ, ಶ್ರೀ ವಿರೂಪಾಕ್ಷ ಪಂಡಿತನು ಕ್ರಿ. ಶ. ೧೫೮೪ ರ ಸುಮಾರಕ್ಕೆ ಆಗಿ ಹೋದನು. ಆಗ ನಡುಗನ್ನಡವು ಉಚ್ಛ್ರಾಯ ಸ್ಥಿತಿಯಲ್ಲಿದ್ದಿತು. ಕವಿಯು ತನ್ನ ಗುರು ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ:—

ಶ್ರೀ ಶಿವನು ಮಲ್ಲೇಶನೆಂಬ ಅಭಿಧಾನದಿಂದ ಭೂಮಿಯಲ್ಲಿ ಅವತರಿಸಿದನು. ಇವನು ೭೦೦ ಖಲಿಂದರರಿಗೆ ಗುರುವಾಗಿ 'ಮಖ್ಖ (ಮಕ್ಕಾ) ಕ್ಕೆ ಹೋಗಿ ಅಲ್ಲಿ ತನ್ನ ಪವಾಡಗಳನ್ನು ತೋರಿ, ಘನತರವಾದ ಕೀರ್ತಿಯನ್ನು ಗಳಿಸಿದನು. ಇವನ ಸಂಪ್ರದಾಯದಲ್ಲಿಯೇ ಷಟ್ಸ್ಥಲಾಬ್ಧಿ ವರ್ಧನಪೂರ್ಣಸೋಮ ನಾಮ 'ಸಿದ್ಧವೀರೇಶ'ನು ವಿದ್ಯಾನಗರಿಯ ಮಠದಲ್ಲಿ ಗುರುವಾಗಿ ಪ್ರಖ್ಯಾತನಾದನು. ಇವನ ಶಿಷ್ಯನೇ 'ವರ ವಿನೂತನ ಪಂಡಿತಾರಾಧ್ಯನೆನಿಸುವ ವಿರೂಪಾಕ್ಷ ಪಂಡಿತೇಶ.'

ಇಲ್ಲಿ ಆರಿಸಿಕೊಂಡ ಅವತರಣಿಕೆಯು '**ಶ್ರೀ ಚೆನ್ನಬಸವ ಪುರಾಣ**'ದ ನಾಲ್ಕನೆಯ ಕಾಂಡದ ಹತ್ತನೆಯ ಸಂಧಿ. ಇಲ್ಲಿ ಅಂಧಕಾಸುರ ಮತ್ತು ಮಹಾದೇವರ ಯುದ್ಧ ವರ್ಣನೆಯೂ, ಶ್ರೀ ಶಿವನು ಅಂಧಕಾಸುರನನ್ನು ಸಂಹರಿಸಿದ ಲೀಲೆಯೂ ರಸವತ್ತಾಗಿ ವರ್ಣಿಸಲ್ಪಟ್ಟಿವೆ. ಸುರಾಸುರರ ಯುದ್ಧದ ವರ್ಣನೆಯೂ, ಅಸುರರ ಅಸಮಸಾಹಸದ ಅದ್ಭುತ ಕೃತಿಗಳೂ ವಾಚಕರ ಅಂತಃಕರಣದಲ್ಲಿ ವೀರಶ್ರೀಯನ್ನೂ ಧೃತಿಯನ್ನೂ ಹುಟ್ಟಿಸುತ್ತವೆ.

**ಕಥಾಸಂದರ್ಭ :—**

ಕನಕಲೋಚನ (ಹಿರಣ್ಯಾಕ್ಷ) ಹಿರಣ್ಯಕಶ್ಯಪು ಎಂಬ ಇಬ್ಬರು ದಾನವೇಂದ್ರರನ್ನು ಶ್ರೀಹರಿಯು ವರಾಹ, ನರಸಿಂಹ ಅವತಾರಗಳಿಂದ ಸಂಹರಿಸಿದ ಕತೆಯು ಲೋಕಪ್ರಸಿದ್ಧವಿದೆ. ಕನಕಲೋಚನನು ಮಹಾತಪಸ್ಸಿನಿಂದ ಶ್ರೀ ಶಿವನನ್ನು ಮೆಚ್ಚಿಸಿ ಹರಿಯಜೇಂದ್ರಾದಿಗಳನ್ನು ಸೋಲಿಸುವ ಅದ್ಭುತ ಶಕ್ತಿವಂತನಾದ ಮಗನನ್ನು ಕೊಡಬೇಕೆಂದು ವರವನ್ನು ಪಡೆದುಕೊಂಡನು. ಅವನಿಗೆ ಅಂಧಃಕಾರವನ್ನೇ ನಾಚಿಸುವಂತಹ ಮದಾಂಧನಾದ ಪುತ್ರನು ಜನಿಸಲು ಅವನಿಗೆ '**ಅಂಧಕಾಸುರ**' ನೆಂಬ ಹೆಸರು ಪ್ರಾಪ್ತವಾಯಿತು. ಅಂಧಕಾಸುರನು ಶಕ್ತಿಮದದಿಂದ ಉಬ್ಬಿದವನಾಗಿ ತ್ರಿಲೋಕವೆಲ್ಲವನ್ನೂ ಕೋಲಾಹಲಕ್ಕೀಡುಮಾಡಿ, ತಣಿಯದೆ ಸರ್ವೇಶ್ವರನ ಮೇಲೆ ದಂಡೆತ್ತಿ ಬಂದನು

ಹರಿಯಜೇಂದ್ರಾದಿಗಳ ನೇತೃತ್ವದಲ್ಲಿ ಶಿವನು ಬಲಾಢ್ಯವಾದ ಸುರಸೇನೆಯೊಂದಿಗೆ ಅಸುರನನ್ನು ಇದಿರಿಸಿದನು. ಅಸುರರ ಅದ್ಭುತವಾದ ಮಾಯಾಲೀಲೆಗೂ, ಭಯಂಕರ ಪರಾಕ್ರಮಕ್ಕೂ ಯಾರೂ ತಡೆಯಲಿಲ್ಲ. ಕಡೆಗೆ ಷಣ್ಮುಖನು ಅಸುರ ಸೇನಾಪತಿಯಾದ ಶಂಬರಾಸುರನನ್ನು ಸೋಲಿಸಿ ದಿಕ್ಕೆಟ್ಟು ಓಡಿಸಿದನು.

ಆವಾಗ ಅಂಧಕಾಸುರನು ಅಸುರವೀರರ ಮಹಾಸಭೆಯನ್ನು ಕರೆದು ಮಂತ್ರಾಲೋಚನೆಯನ್ನು ನಡೆಸಿದನು. ಈ ಸಂಧಿಯಲ್ಲಿ ಅಂಧಕಾಸುರನ ಯುದ್ಧ ಕೌಶಲವೂ, ಮಾಯಾಲೀಲೆಯೂ, ಅಂಧಕಾಸುರನ ಸಂಹಾರವೂ ಚನ್ನಾಗಿ ವರ್ಣಿತವಾಗಿವೆ.

ಅಸುರರ ಮಹಾಸಭೆಯೂ ಅಲ್ಲಿಯ ಕಾರ್ಯ ಕಲಾಪಗಳೂ, ಲೋಕವಿಖ್ಯಾತ ಆಂಗ್ಲ ಮಹಾಕವಿಯಾದ ಮಿಲ್ಟನ್ನನ 'ಗತಸ್ವರ್ಗ' (ಪೆರಡಾಯಿಜ್ ಲಾಸ್ಟ) ಎಂಬ ಕಾವ್ಯದಲ್ಲಿಯ ಸೈತಾನನ ಮಹಾಸಭೆಯ (ಪ್ಯಾಂಡೆಮೋನಿಯಮ) ಕಾರ್ಯಕಲಾಪಗಳನ್ನು ನೆನಪಿಗೆ ತಂದು ಕೊಡುತ್ತವೆ.

**ಟಿಪ್ಪಣಿ:—**

ಅಪರವಾರ್ಧಿ, ಪಶ್ಚಿಮ ಸಮುದ್ರ; ಮಂತಣ (ದ್ಭ) ಮಂತ್ರಣ ಆಲೋಚನೆ; ಮೂರ್ಧ್ನಿ, ತಲೆಯುಳ್ಳವ, ಚೋದ್ಯ, ಆಶ್ಚರ್ಯ; ಕ್ಷತಮಾಗದವರ, ಗಾಯಗೊಳ್ಳದವರ; ನತಮಾಗು, ನಮಸ್ಕರಿಸು; ಅರಿಚು, ಒದರು; ಬಾಜಿಸು, ಬಾರಿಸು; ಪಲ್ಲಣ (ದ್ಭ) ಪಲ್ಯಯನ, (ಹಲ್ಲಣ,) ಸವಾರಿ; ಸೂಳಾಯ್ತು, ಸಾರುವಿಕೆ; ಹರಿಗೆ, ಢಾಲ; ನೇಜಯ, ಚಿಕ್ಕ ಬಚೀ; ಚಾಟುಗೊಳ್ಳು, ಆಶ್ರಯ ಹುಡುಕು; ಕರವಾಳ್, ಖಡ್ಗ. ಮೋದುವರ್, ಜಡಿಯುವರ; ಬಿರುಬು, ಜೋರು; ಅಟ್ಟೆ, ಗದ್ದಲ; ಉರುಬೆ, ಶಕ್ತಿ; ಚಿತ್ತಜಾರಿ, ಶಿವ; ಚಿತ್ತಜ, ಕಾಮ; ಉಗಿ, ಜಗ್ಗು; ಅಭವ, ಶಿವ; ಪಿನಾಕ, ಶಿವ ಧನುಸ್ಸು; ವಿಗತಮದ, ಸೊಕ್ಕು ಅಳಿದ; ಭುಜಂಗಾಭರಣ, ಶಿವ; (ಭುಜಂಗ, ಹಾವು)

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

೧ ಅಂಧಕಾಸುರನು 'ಮಂತಣಂಗೆಯ್ಯಲು' ಕರೆದ ಸಭೆಯಲ್ಲಿ ಗಗನಮೂರ್ಧ್ನಿಯು ಆಡಿದ ಮಾತುಗಳನ್ನು ಸಂಗ್ರಹಿಸಿ ಬರೆಯಿರಿ.

(೧) ಪ್ರಲ್ಹಾದನು ಯುದ್ಧ ಬೇಡೆಂದು ಏಕೆ ಉಪದೇಶಿಸಿದನು?

(೨) ಗಗನಮೂರ್ಧ್ನಿಯು ಗುಪ್ತದಿಂ ಮಾಡಿದ ಯುದ್ಧ ಸನ್ನಾಹವನ್ನು ಬಣ್ಣಿಸಿರಿ.

(೩) ೧೧ನೆಯ ಪದ್ಯದಲ್ಲಿಯ "ಬರಿಯ ವ್ಯಗಳ ... ......" ಇತ್ಯಾದಿ ಮಾತುಗಳಲ್ಲಿ ಹೇಳಿರುವ ರಾಕ್ಷಸ ಸ್ವರೂಪವನ್ನು ಚಿತ್ರಿಸಿರಿ.

(೪) ಗಗನಮೂರ್ಧ್ನಿ ಮೊದಲಾದ ಅಂಧಕಾಸುರನ ಪಕ್ಷದವರ ಹೆಸರು ಗಳನ್ನು ಎದುರು ಬದರಾಗಿ ಪಟ್ಟಿಮಾಡಿರಿ.

(೫) ರಾಕ್ಷಸರು ನಿಶಾಚರರು-ಅವರ ನಾಯಕ ಅಂಧಕಾಸುರ. ಅವರ ಸಭೆ ರಾತ್ರಿಯಲ್ಲಿ-'ಈ ಮೊದಲಾದ ಮಾತುಗಳ ಔಚಿತ್ಯವನ್ನು ಲಕ್ಷಿಸಿರಿ.

(೬) ಅಂಧಕಾಸುರ ಮಹಾದೇವರ ಯುದ್ಧ ಪ್ರಸಂಗವು ಇಲ್ಲಿ ವರ್ಣಿಸಲ್ಪಟ್ಟಿದ್ದರೂ ಕವಿಯ ಕಾಲದ ಯುದ್ಧದ ರೀತಿ, ಆಯುಧಗಳು ಕಾವ್ಯದಲ್ಲಿ ಸೇರುವದು ಸಹಜವು. ಈ ದೃಷ್ಟಿಯಿಂದ ಇಲ್ಲಿಯ ಯುದ್ಧದ ವರ್ಣನೆಯನ್ನು ಓದುವಾಗ ಬರುವ 'ಮದಗಜಂಗಳ್ಗೆ ಪಲ್ಲಣಗಳಂ ಹಾಯ್ಸಿ, ಬಲುಗುದುರೆಗಳ ಬೆಂಗೆ ರಂಚಿಕೆಯನೊಂದಿಸು' ಮೊದಲಾದ ಸನ್ನಾಹದ ರೀತಿಯನ್ನೂ, ಹಲಗೆ ಖಂಡೆಯ ಮೊದಲಾದ ಆಯುಧಗಳ ಉಪಯೋಗವನ್ನೂ ಅಭ್ಯಸಿಸಿರಿ.

(೭) ಗಗನಮೂರ್ಧ್ನಿಯಂ ತರಿದಕಟ್ಟ ಗಗನಮೂರ್ಧ್ನಿಯಂ ಮಾಡಬೇಡವೆ? ಈ ಮಾತನ್ನು ಸ್ಪಷ್ಟೀಕರಿಸಿ ಇಲ್ಲಿಯ ವ್ಯಂಗ್ಯ-ವಿನೋದವನ್ನು ತಿಳಿದುಕೊಳ್ಳಿರಿ.

(೮) ಅಂಧಕಾಸುರನಿಗೂ ಶಿವನಿಗೂ ಆದ ಯುದ್ಧವನ್ನು ಬಣ್ಣಿಸಿರಿ.

(೯) ೧೩ನೆಯ ಪದ್ಯದಲ್ಲಿಯ "ನೂಂಕುವರ್ ತಾಂಕುವರ್" ಎಂಬ ಯಮಕ ಪ್ರಾಸವನ್ನು ಲಕ್ಷಿಸಿರಿ ನಿಮ್ಮ ಅಭ್ಯಾಸದಲ್ಲಿ ಬರುವ ಇಂತಹ ಪ್ರಾಸಯುಕ್ತ ಪದಗಳನ್ನು ಸಂಗ್ರಹಿಸಿರಿ.

(೧೦) ಈ ಪದ್ಯಭಾಗದಲ್ಲಿ, ವಿಶೇಷವಾಗಿ ಕೊನೆಯ ಪದ್ಯದಲ್ಲಿ 'ಶಿವ' ಎಂಬ ಅರ್ಥದಲ್ಲಿ ಬಳಸಿದ ಎಲ್ಲ ಪದಗಳನ್ನು ಸಂಗ್ರಹಿಸಿರಿ.

**ಸಹಾಯಕ ಓದು:—**

ಕವಿಭೂಷಣ ಬೆಟಗೇರಿಯವರು ಬರೆದ 'ಕರ್ನಾಟಕ ಜನಜೀವನ' ಎಂಬ ಗ್ರಂಥದಲ್ಲಿಯ ಹಿಂದಿನ ಕಾಲದ ಯುದ್ಧಗಳಲ್ಲಿಯ ಆಯುಧ ಮೊದಲಾದವುಗಳನ್ನು ತಿಳಿಸುವ ಭಾಗವನ್ನು ಓದಿರಿ.
'ಅಂಧಕಾಸುರನ ಬೇರೆ ಬೇರೆ ಕತೆಗಳ ಬಗ್ಗೆ 'ಪುರಾಣ ನಾಮ ಚೂಡಾಮಣಿ' ಎಂಬ ಗ್ರಂಥವನ್ನು ನೋಡಿರಿ.

**ವ್ಯಾಕರಣ: —**

ಕೆಳಗಿನ ಪದಗಳನ್ನು ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ.
ಮುಂಗಧೆ, ಕಗ್ಗೊಲೆ, ಬಲುಗುದರೆ, ವಿಧ್ವತಸೋದು.



## ೪. ಸರ್ವಜ್ಞನ ವಚನಗಳು

**ವಿದ್ಯೆ—**

ವಿದ್ಯೆಯೀಯದ ತಂದೆ, ಬುದ್ಧಿಕೊಡದಾ ಗುರುವು ।
ಬಿದ್ದಿರಲು ಬಂದು ನೋಡದ ತಾಯಿ ।
ಶುದ್ಧ ವೈರಿಗಳು ಸರ್ವಜ್ಞ. ॥೧॥

**ಮಾತು—**

ರಸಿಕ ನಾಡಿದ ಮಾತು ಶಶಿಯುದಿಸಿ ಬಂದಂತೆ ।
ರಸಿಕನಲ್ಲದನ ಬರಿಮಾತು ಕಿವಿಯೊಳ್ಕೂ ।
ರ್ದಸಿಯು ಬಡಿದಂತೆ ಸರ್ವಜ್ಞ. ॥೨॥

ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ ।
ಹೊತ್ತಾಗಿ ನುಡಿದ ಮಾತು ಕೈ ಜಾರಿದ ।
ಮುತ್ತಿನಂತಿಹುದು ಸರ್ವಜ್ಞ. ॥೩॥

**ಶೌರ್ಯ—**

ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ ।
ಅಡಿಗಶ್ವಮೇಧ ಫಲ; ಸ್ವಾಮಿ ಕಾರ್ಯಕ್ಕೆ ।
ಮುಡಿಯಲೇ ಬೇಕು ಸರ್ವಜ್ಞ. ॥೪॥

ಜಾತಿವೀರರು ಸಾವ ಭೀತಿ ಗಂಜುಳಿವರೆ ?
'ಜಾತಸ್ಯ ಮರಣಂ ಧೃವಂ' ವೆಂದಿರುತಿರೆ ।
ಲೇತಕಂಜುವದು ? ಸರ್ವಜ್ಞ. ||೫||

ಉದ್ಯೋಗ—

ಉದ್ಯೋಗವುಳ್ಳವನ ಹೊದ್ದುವುದು ಸಿರಿಬಂದು ।
ಉದ್ಯೋಗವಿಲ್ಲದಿರುವನಾ ಕರದೊಳ ।
ಗಿದ್ದುದು ಪೋಕು ಸರ್ವಜ್ಞ. ||೬||

ಸ್ವಾತಂತ್ರ್ಯ—

ತಂತಿವಾದ್ಯವು ಲೇಸು, ಮಂತ್ರಿಯಾ ಕೆಳೆ ಲೇಸು, ।
ಯಂತ್ರವಾಹಕನ ದಯೆ ಲೇಸು; ಜಗದಿ ಸ್ವ- ।
ತಂತ್ರವೇ ಲೇಸು ಸರ್ವಜ್ಞ. ||೭||

ಹಂಗಿನ ಹಾಲಿನಿಂದಂಬಲಿಯ ತಿಳಿ ಲೇಸು. ।
ಭಂ ಬಟ್ಟುಂಬ ಬಿಸಿಯಿಂದ ತಿರಿವರ ।
ಸಂಗವೇ ಲೇಸು ಸರ್ವಜ್ಞ. ||೮||

ಜಾತಿ—

ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ ?
ಜಾತಿ ವಿಜಾತಿಯೆನಬೇಡ, ದೇವನೊಲಿ-।
ದಾತನೇ ಜಾತ ಸರ್ವಜ್ಞ, ||೯||

ನಡೆವುದೊಂದೇ ಭೂಮಿ, ಕುಡಿವುದೊಂದೇ ನೀರು ।
ಸುಡುವಗ್ನಿಯೊಂದೇ ಇರುತಿರಲು, ಕುಲಗೋತ್ರ ।
ನಡುವೆ ಎತ್ತಣದು ಸರ್ವಜ್ಞ. ||೧೦||

ಸತ್ಯ—

ಸತ್ಯರಾ ನುಡಿ ತೀರ್ಥ, ನಿತ್ಯರಾ ನಡೆ ತೀರ್ಥ।
ಉತ್ತಮರ ಸಂಗವದು ತೀರ್ಥ! ಹೆಂವನೀ- ।
ರೆತ್ತಣದು ತೀರ್ಥ ಸರ್ವಜ್ಞ. ||೧೧||

ಅನ್ನವನು ಇಕ್ಕುವದು ನನ್ನಿಯನು ನುಡಿಯುವದು ।
ತನ್ನಂತೆ ಪರರ ಬಗೆದಡೆ ಕೈಲಾಸ ।
ಬಿನ್ನಾಣವಕ್ಕು ಸರ್ವಜ್ಞ. ||೧೨||

ದೈವ—

ಒಬ್ಬನಲ್ಲದೆ ಜಗಕೆ ಇಬ್ಬರುಂಟೆ ಮತ್ತೆ ?
ಒಬ್ಬ ಸರ್ವಜ್ಞ ಕರ್ತನು ಜಗಕೆಲ್ಲ ।
ಒಬ್ಬನೇ ದೈವ ಸರ್ವಜ್ಞ. ||೧೩||

ಆ ದೇವ ಈ ದೇವ ಮಾದೇವನೆನಬೇಡ ।
ಆ ದೇವರ ದೇವ ಭುವನ ಪ್ರಾಣಿಗಳಿ ।
ಗಾದವನೆ ದೇವ ಸರ್ವಜ್ಞ.

—ಸರ್ವಜ್ಞ.

——

# ಪರಿಚಯ

ಕನ್ನಡ ಕವಿಗಳಲ್ಲಿ ತನ್ನದೇ ಆದ ಒಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡ ಕವಿ, ಸರ್ವಜ್ಞನು. ಈತನು ೧೬ನೇ ಶತಮಾನದಲ್ಲಿ, ತನ್ನ ಮಾತಿನ ಚೆಲುವಿಕೆಯಿಂದ, ತಿಳಿವಿನ ಬೆಳಕಿನಿಂದ, ಖಂಡಿತವಾದ ಮಾತಿನ ಧೋರಣೆಯಿಂದ ಸಮಾಜವನ್ನು ತಿದ್ದಿದನು. 'ತ್ರಿಪದಿ' ಯು ಇವನಿಂದಲೇ ಕನ್ನಡದಲ್ಲಿ ಅಮರವಾದ ಸ್ಥಾನವನ್ನು ಹೊಂದಿತು. ಇವನ ವಚನಗಳಲ್ಲಿ ಕಂಡದ್ದನ್ನಾಡುವ ಕೆಂಡದಂತಹ ಉಜ್ವಲತೆಯಿದೆ. ಇದ್ದುದನ್ನು ಇದ್ದಂತೆಯಾದರೂ ಮನಮುಟ್ಟುವಂತೆ ಹೇಳುವ ಪ್ರಭಾವಯುತ ರೀತಿಯಿದೆ.

## ಟಿಪ್ಪಣಿಗಳು—

ಈಯದ, ಕೊಡದ; ಶಶಿ, ಚಂದ್ರ (ಶಶ, ಮೊಲ. ಚಂದ್ರನಲ್ಲಿಯ ಕಪ್ಪು ಮೊಲದ ಆಕಾರದಂತೆ ಕಾಣುವದರಿಂದ ಆವನು 'ಶಶಿ') ಕೂರ್ದಸಿ, ಹರಿತವಾದ ಖಡ್ಗವು; ಅಶ್ವಮೇಧ, ಒಂದು ಪ್ರಕಾರದ ಯಜ್ಞ: "ಜಾತಸ್ಯ ಮರಣಂ ಧ್ರುವಂ" ಹುಟ್ಟಿದವನಿಗೆ ಸಾವು ನಿಶ್ಚಿತ; ಪೋಕು ಹೋಗುವದು; ಇಕ್ಕುವುದು, ಕೊಡುವದು; ನನ್ನಿ, ಸತ್ಯ; ಬಿನ್ನಾಣ (ದ್ಭ) ವಿಜ್ಞಾನ, ತಿಳುವಳಿಕೆ,—ಇಲ್ಲಿ ಕೈಲಾಸ ಸುಲಭವಾಗುವದೆಂದು ಕವಿಯ ವಿಚಾರ. ಜಾತ, ಉತ್ತಮ ಕುಲದಲ್ಲಿ ಹುಟ್ಟಿದವ.

## ಅಭ್ಯಾಸ:—

### ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

(೧) ಈ ಪದ್ಯಗಳಿಂದ ಸುಂದರವಾದ ಗಾದೆಯ ಮಾತುಗಳನು ಸಂಗ್ರಹಿಸಿರಿ.

(೨) ಕೆಳಗಿನ ಮಾತುಗಳನ್ನು ಸಮರ್ಥಿಸುವ ಅನುಭವಗಳನ್ನಾಗಲಿ ಉದಾಹರಣೆಗಳನ್ನಾಗಲಿ ಕೊಡಿರಿ:—

ಅ) ಹೊತ್ತಿಗೊದಗಿದಗಿದ ಮಾತು ಸತ್ತವನು ಎದ್ದಂತೆ'

ಆ) ಹಂಗಿನಾ ಹಾಲಿನಿಂದಂಬಲಿಯು ತಿಳಿ ಲೇಸು.'

ಇ) 'ಜಾತಿಹೀನನ ಮನೆಯು ಜ್ಯೋತಿ ತಾ ಹೀನವೆ ?"

(೩) ದೇವರ ಕಲ್ಪನೆಯ ವಿಷಯವಾಗಿ ಯಾವ ಮಹತ್ವದ ಮಾತುಗಳನ್ನು ಸರ್ವಜ್ಞನು ಹೇಳುತ್ತಾನೆ?

(೪) ಪದ್ಯದ ಕೊನೆಗೆ ಬರುವ 'ಸರ್ವಜ್ಞ' ಎಂಬ ಅಂಕಿತದ ಸಾರ್ಥಕತೆಯನ್ನು ಹೇಳಿರಿ.

(೫) ಈ ಪದ್ಯಗಳ ಸಹಾಯದಿಂದ 'ಉತ್ತಮ ಜೀವನ' ಈ ವಿಷಯದ ಬಗ್ಗೆ ಒಂದು ಚಿಕ್ಕ ನಿಬಂಧವನ್ನು ಬರೆಯಿರಿ.

**ಹೆಚ್ಚಿನ ಓದು:—**

ವಿದ್ಯೆ ಮತ್ತು ಜಾತಿ ಇವುಗಳ ಬಗ್ಗೆ ಸರ್ವಜ್ಞನು ಇನ್ನೂ ಅನೇಕ ವಚನಗಳನ್ನು ಹೇಳಿದ್ದಾನೆ. ಅವುಗಳನ್ನು ಸಂಗ್ರಹಿಸಿರಿ.



## ೫. ಬೇವು ಬೆಲ್ಲದೊಳಿಡಲೇನು ಫಲ?

ಬೇವು ಬೆಲ್ಲದೊಳಿಡಲೇನು ಫಲ ನಿತ್ಯ
ಹಾವಿಗೆ ಹಾಲೆರೆದೇನು ಫಲ ||ಪ||

ಕುಟಿಲವ ಬಿಡದಿಹ ಕುಜನರು ಮಂತ್ರದ
ಪಠನೆಯ ಮಾಡಿದರೇನು ಫಲ ||
ಸಟೆಯನ್ನಾಡುವ ಮನುಜರು ಮನದಲಿ
ವಿಠಲನ ನೆನೆದರೇನು ಫಲ ||೧||

ಕಪಟತನದಿ ವಂಚಿಸುವ ಮನುಜರು
ಜಪಗಳ ಮಾಡಿದರೇನು ಫಲ ||
ಕುಪಿತ ಬುದ್ಧಿಯನು ತ್ಯಜಿಸದೆ ನಿತ್ಯದಿ
ಉಪವಾಸವಿದ್ದರಿನ್ನೇನು ಫಲ ||೨||

ಮಾತಾಪಿತರನು ಬಳಲಿಸುವಾ ಮಗ
ಯಾತ್ರೆಯ ಮಾಡಿದರೇನು ಫಲ ||
ಘಾತಕತನವನು ಬಿಡದೆ ನಿರಂತರ
ನೀತಿಯನೋದಿದರೇನು ಫಲ ||೩||

ಪತಿಯನು ನಿಂದಿಸಿ ಬೊಗಳುವ ಸತಿಯಳು
ವ್ರತಗಳ ಮಾಡಿದರೇನು ಫಲ ||
ಅತಿಥಿಗಳೆಡೆಯಲಿ ಭೇದವ ಮಾಡುತ
ಗತಿಯನು ಬಯಸಿದರೇನು ಫಲ ||೪||

ಹೀನಕೃತ್ಯಗಳ ಮಾಡುತ ನದಿಯಲ್ಲಿ
ಸ್ನಾನವ ಮಾಡಿದರೇನುಫಲ ॥
ಶ್ರೀನಿಧಿ ಪುರಂದರ ವಿಠಲನ ನೆನೆಯದೆ
ಮೌನವ ಮಾಡಿದರೇನು ಫಲ ॥೫॥

—ಪುರಂದರದಾಸರು.



# ಪರಿಚಯ

ಪುರಂದರದಾಸರು— ಇವರು ದಾಸಕೂಟದಲ್ಲಿ ಅತ್ಯಂತ ಹೆಸರಾದವರು. ಇವರು ೧೬ನೇ ಶತಮಾನದ ಆದಿಭಾಗದಲ್ಲಿ ಆಗಿ ಹೋದರು ಇವರ ಚರಿತ್ರೆಯು ಕನ್ನಡನಾಡಿನಲ್ಲಿ ಮನೆ ಮನೆಯ ಮಾತಾಗಿದೆ. ಇವರು ಪಂಢರಪುರದ ಬಳಿ ಒಂದು ಹಳ್ಳಿಯಲ್ಲಿ ಜನ್ಮವೆತ್ತಿದರು. ಮೊದಲು ಅತ್ಯಂತ ಜಿಪುಣರಾಗಿದ್ದರಂತೆ! ಆದರೆ ದೈವ ಕೃಪೆಯಿಂದ, ಪತ್ನಿಯ ಪುಣ್ಯದಿಂದ ತಿಳಿವುಂಟಾಗಿ ದಾಸ ಪಂಥವನ್ನು ಸ್ವೀಕರಿಸಿದರು. ಇವರ ಹಾಡುಗಳು ಭಾವಗರ್ಭಿತವೂ, ಅರ್ಥಪೂರ್ಣವೂ, ಸುಲಭವೂ ಆಗಿವೆ. ಕನ್ನಡ ನಾಡಿನಲ್ಲಿ ಇವರ ಹಾಡುಗಳಿಗಿದ್ದಷ್ಟು ಪ್ರಚಾರವು ಇನ್ನಾವುದಕ್ಕೂ ಇಲ್ಲವೆಂದು ಹೇಳಬಹುದು. 'ಪುರಂದರ ವಿಟ್ಠಲ' ಎಂಬ ಅಂಕಿತವನ್ನಿಟ್ಟುಕೊಂಡು, ಲಕ್ಷಾಂತರ ಹಾಡುಗಳನ್ನು ಬರೆದರೆಂಬ ಪ್ರತೀತಿಯಿದೆ.

ಈ ಹಾಡಿನಲ್ಲಿ ಮನುಷ್ಯನ ನೀತಿಯನ್ನು ಸೂಚಿಸಲಾಗಿದೆ. ಬಾಹ್ಯಾಡಂಬರದಿಂದೇನೂ ಪ್ರಯೋಜನವಿಲ್ಲ; ಆದರೆ ನಿರ್ಮಲವಾದ ಸತ್ಯಕ್ಕೇ ನಿಜವಾದ ಬೆಲೆಯಿದೆಯೆಂಬ ವಿಚಾರವನ್ನು ಅನೇಕ ಉದಾಹರಣೆಗಳಿಂದ ಇಲ್ಲಿ ತಿಳಿಸಲಾಗಿದೆ. ಅನೇಕ ಮಾತುಗಳು ನಾಣ್ನುಡಿಗಳಾಗಿವೆ.

**ಟಿಪ್ಪಣಿ:—**

ಹಾಲೆರೆ, ಹಾಲುಹೊಯ್ಯು—ಹಾಕು; ಕುಟಿಲ, ಮೋಸ; ಕುಜನರು, ದುಷ್ಟ ಜನರು; ಸಟಿ, ಸುಳ್ಳು.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ:—**

೧ ಸಾಮಾನ್ಯ ಜನತೆಯು ಯಾವ ದೋಷಗಳನ್ನು ಪುರಂದರದಾಸರು ಎತ್ತಿ ತೋರಿಸಿದ್ದಾರೆ?

೨ ಕುಟಿಲರು, ಘಾತಕರು ಮತ್ತು ಹೀನರು ತಮ್ಮ ದೋಷಗಳನ್ನು ಹೇಗೆ ಮುಚ್ಚಲು ಯತ್ನಿಸುತ್ತಾರೆ ?

೩ ಪುರಂದರದಾಸರು ಈ ಹಾಡಿನಿಂದ ಸಮಾಜದಲ್ಲಿ ಯಾವ ಸುಧಾರಣೆಯನ್ನು ಅಪೇಕ್ಷಿಸುತ್ತಾರೆ ?

೪ ಈ ಹಾಡಿಗೆ ಬೇರೆ ಯಾವದಾದರೂ ಹೆಸರನ್ನು ಕೊಡಬಹುದೇ ?

## ಹೆಚ್ಚಿನ ಓದು:—

ಸಮಾಜದ ಲೋಪದೋಷಗಳನ್ನು ಬಯಲಿಗೆಳೆಯುವ ದಾಸರ ಬೇರೆ ನಾಲ್ಕಾರು ಹಾಡುಗಳನ್ನು ಸಂಗ್ರಹಿಸಿರಿ.

## ೬ ಸಂಚಿಯ ಹೊನ್ನಮ್ಮ

ಶ್ರೀರಂಗ ಪಟ್ಟಣದೊಳು ರತ್ನ ಸಿಂಹಾಸ
ನಾರೋಹಣವನಾಚರಿಸಿ
ಧಾರಿಣಿಯನು ಧರ್ಮದೊಳು ಪಾಲಿಸುತ ಮ-
ಹಾರಾಜನೆನಿಸಿ ರಾಜಿಸನು ||೧||

ಚಿಕದೇವರಾಜಚಂದ್ರಮನ ಪಟ್ಟದರಾಣಿ
ಸಕಲ ಸದ್ಗುಣ ಸಂಪನ್ನೆ
ಅಕಲುಷೆ ಯೆಳವಂದೂರ ದೇವಮ್ಮನು
ಸಕಲ ಸಂಪದದೊಡನಿಹಳು ||೨||

ಓಲಗಗೊಳುತೊಂದು ದಿನವೆಡಬಲದ ಸು
ಶೀಲೆಯರೊಳು ಕಡೆಗಣ್ಣ
ಸಾಲುವಿಡಿದು ಸುಳಿ ಸುಳಿಸಿಯೆನ್ನೊಳು ಸತ್ಕೃ
ಪಾಲೋಕನವನೆಸಗಿದನು ||೩||

ಎನ್ನ ಮನ್ನಿಪೆನೆಂದೆಣಿಸಿ ತನ್ನೆಡದೊಂದು
ಪೊನ್ನ ಪುತ್ತಳಿಯೆಂತೆಸೆವ
ಮನ್ನಣೆವಡೆದ ಪಟ್ಟದ ರಾಣಿಯ ಮೊಗ
ಮನ್ನೋಡುತಿಂತು ನುಡಿದನು ||೪||

ಅರಸಿ ಕೇಳೀ ಹೊನ್ನಿ ಸರಸ ಸಾಹಿತ್ಯದ
ವರದೇವತೆ ತಾನೆಂದು

ಪರಮಾರ್ಥವಾದಿಯಳಸಿಂಗರಾರ್ಯನು
ಪರಿಪರಿಯೊಳು ಬಣ್ಣಿಪನು ||೪||

ಓದುಗಲಿಸುವರೊಲಿದು ಪೊಗಳಿದೊಡಾ
ವೋದುಗಲಿವರೋದುಗಳು
ಮೇದಿನಿಯೊಳು ಮೇಲೆನಿಪುವೆಂಬುದು ಲೋಕ
ವಾದವ್ಯೆಸಲೆ ರಾಣಿ ಕೇಳು ||೬||

ಪವಣಿಗೆಯೊಪ್ಪೆ ಪುರುಳು ಪೊಗರೇರೆ ಯಂ
ಗವಿಸೆಯಲಂಕಾರಗಳು
ಕವಿದು ಪರಿಯೆ ರಸವೊಳ್ಗಂಪು ಕಮ್ಮನೆ
ಕವಿತೆಯೊಂದನು ಪೇಳಿಸಿಂದು ||೭||

ಕಲಿತ ಬಿಜ್ಜೆಯು ಬಲ್ಲಂಗೆ ಕೇಳಿಪುದ್ಯೆಸೆ
ಫಲವಿದನಂತು ನೀನಿಂದು
ಅಲಸದೆ ನಾಣ್ಚದಂಜದೆಯಳುಕದೆ ಪೇಳು
ಪಲವಗೆ ಕಬ್ಬದೊಳ್ಪುಗಳ ||೮||

ಇಂತು ನುಡಿದ ರಾಣಿಯು ನುಡಿಗೇಳಿ ಯೊ
ರಂತೆ ಚಿತ್ತವ ಬಲವಿಡಿದು
ಸಂತಸ ಮಿಗೆ ಸಭೆಯೊಳು ರಾಯಗೆ ಮಾ
ರಾಂತು ಬಿನ್ನವಿಸಿದೆನಿಂತು ||೯||

ಅರಸ ಕೇಳೆನಗೆ ನಿನ್ನಡಿಯೂಳಿಗ ವೊಂ
ದರಸಿಯರಡಿಯೊಲ್ಮೆಯೊಂದು
ಪಿಂಕಿಪೊಡಖಿಳಾರ್ಥ ಸಾಧನಂಗಳಿಗಿವು
ನೆರವಾಗಿಹವು ನೇಮವೊಳು ||೧೦||

ನಿನ್ನ ಕೃಪಾರಸದಿಂದಾನು ಕ
ರ್ಬೊನ್ನ ಚೆಂಬೊನ್ನಾದಂತೆ
ಸನ್ನುತಿವಡೆದೊಳ್ಪುವೆತ್ತು ಸಕಲ ಭಾ
ಗ್ಯೋನ್ನತಿಯೊಡಗೂಡಿಹೆನು ||೧೧||

ಒಡೆಯನಿರಿಸಿದಂತಿರ್ಪುದಲ್ಲದೆ ಪೇ
ಳೊಡವೆಗೆ ಬೇರಿರವುಂಟೆ ?
ಕಡುಗೂರ್ಮೆಯಿಂದ ನಿನ್ನಡಿಯಾಣತಿಯನೆನ್ನ
ಮುಡಿಯೊಳಾಂತೆನು ಮತ್ತೇನು ||೧೨||

ಆದೊಡೆಮೆನ್ನ ಕವಿತೆಗಬ್ಬದ ಬಗೆ
ಈ ದಿವ್ಯ ಸಭೆಗೆ. ಸಂಗತಮೆ
ಪಾದದೂಳಿಗದೊಳು ಬೆಳೆದ ಬಾಲಕಿ ಯೆಂ
ದಾದರದಿಂದಾಲಿಪುದು ||೧೩||

ಪದಿನೆಂಟು ಬಣ್ಣನೆಯೆಂದು ಬವಣಿಗೊಂಡು
ಪದೆಗೆಟ್ಟು ಬಯಲ ಬಣ್ಣಿಸದೆ
ಮುದದೊಡನಿಹಪರದೇಳ್ಗೆವಡೆಯೆ ಹದಿ
ಬದೆಯ ಧರ್ಮವ ಬಣ್ಣಿಪೆನು ||೧೪||

ಬಲ್ಲರಿಂದಾನು ಕೇಳಿದುದಕೆ ಪೆರ್ಚು ಕುಂ
ದಲ್ಲದಂತೆಚ್ಚರುಗೂಡಿ
ಎಲ್ಲರುಮರಿವಂತೆಳಮಾತುಗಳಿಂದ
ಸೊಲ್ಲಿಸುವೆನು ಸೊಗಸುವೊಲು ||೧೫||

ಆದಿಕಾವ್ಯದೊಳೈದನೆಯ ವೇದದೊಳು ಮ
ನ್ವಾದಿಕ ಧರ್ಮ ಶಾಸ್ತ್ರದೊಳು

ಭೇದಿಸಿ ಪಿರಿಯರು ಪೇಳಿದುದನೆ ಕೃತಿ
ಗೈದಾನು ತಿಳಿಗೊಳಿಸಿದೆನು ||೧೬||

ಇದನಾಲಿಪುದೊಳ್ಪೆಂಡಿರೀ ಧರ್ಮದ
ಹದನರಿತಾಚರಿಸುವದು
ಇದನು ಕಲಿವುದಿದರೊಳಗರಿವುದು ಹದಿ
ಬದೆಯರೆನಿಸಿ ಬಾಳುವದು ||೧೭||

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸಿರ್ದ ಕಬ್ಬದೊಳು
ಉನ್ನತಿವಡೆದೊಗೆದುದು ಪೀಠಿಕಾಸಂಧಿ
ಸನ್ನುತ ಗುಣಸಂಬಂಧಿ ||೧೮||

—ಹೊನ್ನಮ್ಮ



# ಪರಿಚಯ

'ಹದಿಬದೆಯ ಧರ್ಮ' ಎಂಬ ಸಾಹಿತ್ಯ ಗ್ರಂಥವನ್ನು ಬರೆದ ಹೊನ್ನಮ್ಮನ ಪರಿಚಯವು, ಅವಳು ಬರೆದ ಗ್ರಂಥದಲ್ಲಿಯೇ ಸಿಗುವದು ಇವಳು ಎಳೆಯತನದಿಂದಲೂ ಮೈಸೂರ ಅರಸರಾದ ಚಿಕದೇವರಾಜರ ಪಟ್ಟದರಸಿಯಾದ ಎಳಂದೂರ ದೇವಾಜಮ್ಮಣ್ಣಿಯವರನ್ನು ಓಲೈಸಿಕೊಂಡು ಇದ್ದಳೆಂದು ತೋರುತ್ತದೆ. ರಾಜದಂಪತಿಗಳು ಇವಳ ಚುರುಕು ಬುದ್ಧಿಯನ್ನರಿತು ಅವಳ ಓದಿಗೆ ಅವಕಾಶವನ್ನು ಕಲ್ಪಿಸಿಕೊಟ್ಟರು ವಿದ್ಯಾಗುರುವಾದ ಅಳಸಿಂಗರಾರ್ಯನು ಇವಳಿಗೆ ಕನ್ನಡ ಸಂಸ್ಕೃತ ಅಭ್ಯಾಸವನ್ನು ಮಾಡಿಸಿದನು. ರಾಜರ ಕರುಣೆಯಿಂದ 'ಕಬ್ಬೊನ್ನು' ಚಿಂಬೊನ್ನಾದಂತೆ ಹೊನ್ನಮ್ಮ ವಿದ್ಯಾವತಿಯಾಗಿ 'ಹದಿಬದೆಯ ಧರ್ಮ' ವನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟು, ಸ್ತ್ರೀಯರು ಪುರುಷರಿಗಿಂತ ಪ್ರತಿಭೆಯಲ್ಲಿ ಕಡಿಮೆಯಲ್ಲವೆಂಬ ಮಾತಿನ ನಿದರ್ಶನವನ್ನು ಮಾಡಿಕೊಟ್ಟದ್ದಾಳೆ

ನಾವು ಇಲ್ಲಿ ಆಯ್ದುಕೊಂಡ ಭಾಗವು 'ಹದಿಬದೆಯಧರ್ಮ' ದಲ್ಲಿಯ ಮೊದಲನೆಯ ಸಂಧಿಯಲ್ಲಿಯದು. ಇವಳ ಕಾಲ ೧೭ನೆಯ ಶತಮಾನದ ಕೊನೆಯ ಭಾಗ

**ಟಿಪ್ಪಣಿ:–**

ಅಕಲುಷೆ, ಕಲಂಕರಹಿತಳು; ಪವಣಿಗೆ, ಹೊಂದಿಕೆ; ಪುರುಳು, ಅರ್ಥ; ಅಂಗವಿಸು, ಕೂಡಿಬರು; ಕದುಬು, ಉತ್ಸಾಹ.

**ಅಭ್ಯಾಸ:--**

**ಕೆಳಗಿನ ಪ್ರಶ್ನಗಳಿಗೆ ಉತ್ತರ ಬರೆಯಿರಿ**

೧ ತಾನು ಬರೆದ ಗ್ರಂಥವು ಎಂಥದಿದೆಯೆಂದು ಅವಳ ಅಭಿಪ್ರಾಯವಿದೆ?

೨ ನೀವು ಓದಿದ ಭಾಗದಿಂದ ಹೊನ್ನಮ್ಮನ ಜೀವನ ಪರಿಚಯ ವನ್ನು ಸಂಗ್ರಹಿಸಿ ಬರೆಯಿರಿ.

೩ ಹೊನ್ನಮ್ಮನು 'ಸರಸ ಸಾಹಿತ್ಯದ ವರದೇವತೆ' ಎಂಬ ಮಾತು ಎಷ್ಟರ ಮಟ್ಟಿಗೆ ಸತ್ಯವಿದೆ?

೪ ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದ ಬೇರೆ ಕವಿಗಿತಿಯರು ಯಾರು? ಅವರು ಬರೆದ ಗ್ರಂಥಗಳು ಯಾವವು?

**ವ್ಯಾಕರಣಃ—**

ಕೆಳಗಿನ ಕೂಡುನುಡಿಗಳನ್ನು ಬಿಡಿಸಿ ಅವುಗಳ ಹೆಸರು ಹೇಳಿರಿ:—

ಕಡೆಗಣ್ಣು, ಚೆಂಬೊನ್ನು, ಕರ್ಬೊನ್ನು.



# ೭. ನವಿಲು

ಕುಣಿ ಕುಣಿ, ನವಿಲೇ, ಕುಣೀ ಕುಣೀ

ಬಿಸಿಲಿಗೆ ಬೇಯುತ ಬಾಯ್ ಬಿಡುತಿದೆ ಇಳೆ,
ಕುದಿವುದು ನೋಡವು ತೊಟ್ಟಿಡದಿದೆ ಮಳೆ,
ಬತ್ತಿತು ಹಳ್ಳವು ಆತ್ತಿತು ತೊರೆ ಹೊಳೆ,
ತಾಪವ ನೀ ಮರೆ ಕುಣೀ ಕುಣೀ ||೧||

ನಿನಗಿದೆ ಸಾವಿರ ಕಣ್ಣಿನ ಛತ್ರ,
ಮೂಲೋಕಕು ಬೀಸಣಿಕೆ ವಿಚಿತ್ರ
ಸರಸತಿ ಅರಳಿಸಿದೀ ಶತಪತ್ರ
ರೋಮಾಂಚನದೊಳು ಕುಣೀ ಕುಣೀ ||೨||

ನೀ ಕುಣಿ, ಜೊತೆಗಾತಿಯನೂ ಕುಣಿಸು;
ನಿನ್ನ ನೋಡಿ ಜಗ ಮರೆವರ ತಣಿಸು,
ಹರುಷ ಬಾಷ್ಪಗಳನೆತ್ತಲು ಹಣಿಸು,
ಕೇಕೆಯ ಹಾಕುತ ಕುಣೀ ಕುಣೀ ||೩||

ನಭಕ್ಕೆ ಏನಿದೆ ನೆಲದಲಿ ಆಸೆ ?
ನೆಲಕಿದೆ ಆರದ ಶುಷ್ಕ ಪಿಪಾಸೆ !
ಮೋಳಗಲಿ ನಿನ್ನಾನಂದದ ಭಾಷೆ
ನೆಲ ಮುಗಿಲನು ಹೆಣೆದೀತು ಮಳೆ; ||೪||

ಮುಗಿಲನು ಮುದ್ದಿಡೆ ನೆಲದ ಬೆಳೆ
ಚಿಗಿವುದು ಜಗಿವುದು ನೆಗೆವುದಿಳೆ;
ಚಿಕ್ಕೆ ಇರುಳು ಕುಣಿದಂತೆ ಕುಣೀ
ಕುಣಿ ಕುಣಿ ನವಿಲೇ ಕುಣೀ ಕುಣೀ ||೫||

—ಅಂಬಿಕಾತನಯದತ್ತ.

# ಪರಿಚಯ

**ದತ್ತಾತ್ರೇಯ ರಾಮಚಂದ್ರ ಬೇಂದ್ರೆ** ಇವರು ಈಗ ಸೊಲ್ಲಾಪುರದ ಡಿ. ಏ. ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ.

ಈ ಕವಿತೆಯನ್ನು ಅಂಬಿಕಾತನಯದತ್ತ (ಬೇಂದ್ರೆ) ರವರ **'ಉಯ್ಯಾಲೆ'** ಎಂಬ ಕವನ ಸಂಗ್ರಹದಿಂದ ಆಯ್ದುಕೊಂಡಿದೆ. ಶ್ರೀ ಬೇಂದ್ರೆಯವರು ಆಧುನಿಕ ಕವಿಗಳಲ್ಲಿ ಶ್ರೇಷ್ಠರು. ಇವರು ಬರೀ ಕವಿಗಳಷ್ಟೇ ಅಲ್ಲ. ಮೇಲ್ತರಗತಿಯ ವಿಮರ್ಶಕರು, ತತ್ವಜ್ಞರು, ವಾಗ್ಮಿಗಳು. 'ಗರಿ' 'ನಾದಲೀಲೆ' 'ಉಯ್ಯಾಲೆ' 'ಸಖೀಗೀತ' 'ಮೂರ್ತಿ' ಮೊದಲಾದವು ಇವರ ಪದ್ಯಗ್ರಂಥಗಳು. ಇವರ ಕಾವ್ಯ ಶಕ್ತಿಯನ್ನು ಶ್ರೀ ಮಾಸ್ತಿಯವರು ಹೀಗೆ ಹೇಳಿದ್ದಾರೆ:

"ಬೇಂದ್ರೆಯವರ ಕಾವ್ಯ ದೃಷ್ಟಿ ತೀವ್ರವಾದುದು ಶ್ರೇಷ್ಠ ವರ್ಗದ್ದು; ವಿಲಕ್ಷಣವಾದುದು. ಜೊತೆಗೆ ಅವರ ಜೀವನ ಅವರಿಗೆ ತೀವ್ರವಾದ, ಶ್ರೇಷ್ಠವಾದ, ವಿಲಕ್ಷಣವಾದ ಅನುಭವವನ್ನು ತಂದಿದೆ. ಇದರಿಂದ ಅವರ ಕೃತಿಯಲ್ಲಿ ಇವೇ ಲಕ್ಷಣಗಳು ಮೂಡಿವೆ. ಕಾವ್ಯದ ಬಣ್ಣ ಲೋಕದ ಬಣ್ಣವಾಗಿದೆ.

ಸುತ್ತಲ ವಾತಾವರಣದಿಂದ ಮೈಮನ ತಣಿದು ಆನಂದೋನ್ಮಾದದಿಂದ ಕುಣಿಯುವ ನವಿಲಿನ ಚಿತ್ರವನ್ನು ಮನ ತಟ್ಟುವಂತೆ ಕವಿವರ್ಯರು ರೂಪಿಸಿದ್ದಾರೆ.

**ಟಿಪ್ಪಣಿ:—**

ಶತಪತ್ರ, ಕಮಲ; ಪಿಪಾಸೆ, ನೀರಡಿಕೆ.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

(೧) ಕವಿಯು ನವಿಲನ್ನು ಯಾವ ಯಾವ ಮಾತುಗಳಿಂದ ಬಣ್ಣಿಸಿದ್ದಾನೆ?

(೨) "ಕುಣಿ, ಕುಣಿ, ನವಿಲೇ ಕುಣೀ ಕುಣೀ" ಎಂದು ಕವಿಯು ಏಕೆ ಹೇಳುತ್ತಾನೆ?

(೩) ನವಿಲಿಗೆ ಎಂಥ ಕುಣಿ ಎಂದು ಕವಿಯು ಹೇಳುತ್ತಾನೆ ?

(೪) ನವಿಲಿನ ಆನಂದದ ಭಾಷೆ ಯಾವುದು ? ಅದು ಏಕೆ ಮೊಳಗ ಬೇಕು ?

(೫) ೧೭, ೧೮ ಮತ್ತು ೧೯ನೆಯ ಸಾಲುಗಳಲ್ಲಿ ಅಡಕವಾಗಿರುವ ಕಲ್ಪನೆಗಳು ಯಾವವು ?

(೬) ರಣಗುಡುತ್ತಿರುವ ಬೇಸಿಗೆಯ ಬಿಸಿಲನ್ನು "ಬಿಸಿಲಿಗೆ ಬೇಯುತ ಬಾಯ್ಬಿಡುತಿದೆ ಇಳೆ" ಎಂದು ಕವಿಯು ವರ್ಣಿಸಿದ್ದಾನೆ. ಕವಿಯು ಇದೇ ರೀತಿ ಕೆಳಗಿನ ಮಾತುಗಳನ್ನು ಹೇಗೆ ಬಣ್ಣಿಸಬಹುದು ?

(೧) ಅರುಣೋದಯ (೨) ಕಗ್ಗತ್ತಲೆ (೩) ಎತ್ತರವಾದ ಗಿಡ

**ಹೆಚ್ಚಿನ ಓದು:—**

ಮುಗಳಿಯವರ ಬಾಸಿಗವೆಂಬ ಕವನಸಂಗ್ರಹದಲ್ಲಿಯ "ಹೊಸ ಕಾಲದ ನವಿಲು" ಎಂಬ ಗೀತವನ್ನೂ, ಪುಟ್ಟಪ್ಪನವರ 'ನವಿಲು-ಭಾಗ ೧' ಎಂಬ ಪುಸ್ತಕದಲ್ಲಿಯ 'ನವಿಲು' ಎಂಬ ಭಾವಗೀತವನ್ನೂ ಇದರೊಂದಿಗೆ ಹೋಲಿಸಿರಿ.



## ೬ ಮಾವಿನ ಗೊಲ್ಲೆ

ನಾವು । ದೇವನ ದೇಟಿನ ಕಾಯಿಗಳು
ಎಲ್ಲಾ॰ । ಒಂದೇ ದೇಟಿನ ಮಾವುಗಳು

ಎಲ್ಲಾ ಪ್ರಾಣಿಗಳು
ಎಲ್ಲಾ ವಸ್ತುಗಳು
ಎಲ್ಲಾ ಎಲ್ಲಾ॰ ಎಲ್ಲಾ॰॰

ಎಲ್ಲಾ॰। ಒಂದೇ ದೇಟಿನ ಮಾವುಗಳು
ನಾವು । ದೇವನ ದೇಟಿನ ಕಾಯಿಗಳು ॥

ಒಂದೋ ಬಲು ಹಿರಿದು
ಒಂದೋ ಅತಿ ಕಿರಿದು
ಚಿಕ್ಕದು ದೊಡ್ಡದು ಎಲ್ಲಾ

ಎಲ್ಲಾ...........................................................................................

ಒಂದೋ ಸವಿ ಹಣ್ಣು
ಒಂದೋ ಹುಳಿ ಹೀಚು
ಹಣ್ಣು ಹೀಚು ಎಲ್ಲಾ

ಎಲ್ಲಾ ...........................................................................................

ಸಂಪ್ರೀತಿಯ ಸುರರು
ರೊಚ್ಚಿನ ರಕ್ಕಸರು
ಎಲ್ಲಾ ಎಲ್ಲಾ॰ ಎಲ್ಲಾ॰॰

ಎಲ್ಲಾ॰ । ಒಂದೇ ದೇಟಿನ ಮಾವುಗಳು
ನಾವು । ದೇವನ ದೇಟಿನ ಕಾಯಿಗಳು ॥

— ಮಧುರಚೆನ್ನ

# ಪರಿಚಯ

**ಚೆನ್ನಮಲ್ಲಪ್ಪ ಹಲಸಂಗಿ** ಇವರು ಕನ್ನಡ ನಾಡಿನ ವರ ಕವಿಗಳಲ್ಲಿ ಓರ್ವರು '**ಮಧುರಚೆನ್ನ**' ಎಂಬುದು ಇವರ ಕಾವ್ಯ ನಾಮ. ಇವರು ಸುಪ್ರಸಿದ್ಧ ಸಾಧಕರು. ಇವರ ಪ್ರತಿಯೊಂದು ಗೀತದಲ್ಲಿ ಅಧ್ಯಾತ್ಮವು ಸುಂದರವಾಗಿ ಪ್ರತಿಬಿಂಬಿತವಾಗಿರುತ್ತದೆ. ಇವರು ಹಲಸಂಗಿಯುವರು. ಅರವಿಂದ ಗ್ರಂಥಮಾಲೆಯೆಂಬ ಆಧ್ಯಾತ್ಮ ವಿಚಾರದ ಒಂದು ಗ್ರಂಥ ಮಾಲೆಯನ್ನು ಪ್ರಾರಂಭಿಸಿದ್ದರು. ಇವರು 'ಪೂರ್ವರಂಗ' 'ಕಾಳಿರುಳು' ಮೊದಲಾದ ತಮ್ಮ ಸಾಧಕ ಜೀವನದ ಆತ್ಮ ಚರಿತ್ರದ ಗ್ರಂಥಗಳನ್ನೂ 'ನನ್ನ ನಲ್ಲ' ಎಂಬ ಸುಂದರವಾದ ಗೀತ ಸಂಗ್ರಹವನ್ನೂ ಪ್ರಕಟಿಸಿದ್ದಾರೆ. ಮಾನವ ಕುಲದ ವಿವಿಧತೆಯನ್ನು ತೋರಿಸಿ ಅದರಲ್ಲಿರಬೇಕಾದ ಒಂದುತನವನ್ನೂ ಅನ್ಯೋನ್ಯ ಪ್ರೇಮವನ್ನೂ, ಸೂಚಿಸುವ ರೀತಿ ಈ ಚಿಕ್ಕ ಗೀತದಲ್ಲಿ ಸೊಗಸಾಗಿ ಬಂದಿದೆ.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:**

(೧) "ನಾವು ದೇವನ ದೇಟಿನ ಕಾಯಿಗಳು
"ಎಲ್ಲಾ ಒಂದೇ ದೇಟಿನ ಮಾವುಗಳು."
ಎಂದು ಹೇಳುವದರ ರಹಸ್ಯವೇನು ?

(೨) ಪ್ರಾಣಿಗಳ ಬೇರೆ ಬೇರೆ ಗುಣಧರ್ಮಗಳನ್ನು ಕವಿಯು ಯಾವ ಯಾವ ಮಾತುಗಳಿಂದ ಬಣ್ಣಿಸಿದ್ದಾನೆ ?

(೩) ಈ ಕವಿತೆಗೆ "ಮಾವಿನ ಗೊಲ್ಲೆ" ಎಂದು ಏಕೆ ಹೆಸರಿಡಲಾಗಿದೆ? ಇದಕ್ಕೆ ಬೇರೆ ಯಾವ ಹೆಸರನ್ನು ಸೂಚಿಸಬಹುದು?

(೪) ಈ ಪದ್ಯದಲ್ಲಿ ಯಾವ ಮಾತುಗಳು ಮತ್ತೆ ಮತ್ತೆ ಬರುತ್ತವೆ ? ಈ ಪುನರುಕ್ತಿಯ ಉದ್ದೇಶವೇನು ?

(೫) "ಸಂಗೀತ ಗೀತ" ಮತ್ತು 'ಪತಿತ ಪಾವನ' ಎಂಬ ಗೀತಗಳಲ್ಲಿಯ ವಿಚಾರಗಳನ್ನೂ ಇಲ್ಲಿಯ ವಿಚಾರಗಳನ್ನೂ ಪರಿಶೀಲಿಸಿರಿ.

## ೯. ಕೌಶಿಕನು ರಾಮಲಕ್ಷ್ಮಣರನ್ನು ಕರೆದೊಯ್ದುದು

ಶ್ರೀರಘುಕುಲಮಣಿ
ವೀರ ಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಬಂದನು ಕೌಶಿಕ-
ನೊಂದು ದಿವಸ ಮುನಿ-
ವಂದಿತ ಚರಣ-
ದ್ವಂದ್ವ ತಪಸ್ವಿ ೨

ರಾಜಭವನಕಾ-
ತೇಜೋನಿಧಿ ಬರೆ,
ಪೂಜಿಸಿ ನುಡಿದನು
ರಾಜನು ನಯದೆ ೩

"ಒಸಗೆಯೆನಗೆ ನೀ-
ವೊಸೆದೈತಂದುದು
ಬೆಸಸಿರಿ ಬರಲು-
ದ್ದೆಸವೇನೆಂದು ೪

ಎಂದೊಡೆ ಕೌಶಿಕ
ನೆಂದನು "ನೃಪನೀ-
ನೆಂದುದು ನನಗಾ-
ನಂದಾವಹವು ೫

"ಬಂದಿರುವೆನು ನಾ-
ನಿಂದಿಲ್ಲಿಗದೇ-
ಕೆಂದೊಡೆ, ಜನತಾ-
ನಂದನೆ, ಕೇಳು ೬

"ನೀಚರಹಾ ಮಾ–
ರೀಚ ಸುಬಾಹುಗ-
ಳಾಚರಿಸುವರಸ–
ಮೀಚೀನವನು ! ೭

"ಎಡರೊದಗಿಸಿ ಹಾಳ್-
ಗೆಡಹುತೆ ಮಖವನು
ಕಡುದುಗುಡವನೆನ-
ಗೊಡರಿಸುತಿಹರು ೮

ಮೀರಿಹರೆಲ್ಲರ-
ನೀ ರಾಕ್ಷಸರು;
ಶ್ರೀ ರಾಮನೆ ಸಂ-
ಹಾರಕನಹನು ೯

"ಧೀಮಂತನು ನಿ-
ಸ್ಸೀಮ ಬಲಾಢ್ಯನು

ರಾಮನು ಲೋಕ-
ಕ್ಷೇಮಾವಹನು ೧೦

"ಒಪ್ಪಿಸು ಕುಲಗುರು-
ವೊಪ್ಪಿದರವನನು.
ತಪ್ಪರು ರಾಘವ-
ರೊಪ್ಪಿದ ನುಡಿಗೆ" ೧೧

ಮುನಿ ನುಡಿದಪ್ರಿಯ
ವನು ಕೇಳುತಲಾ-
ಜನಪನು ಬಸವಳಿ
ದನು ಮೆಯ್ಬೆವರಿ ೧೨

ನೊಂದನು ಮನದೊಳು,
ಸಂದನು ಮೂರ್ಛೆಗೆ,
ಬಂದಿತಿದೇನೆನ
ಗೆಂದುಮ್ಮಳಿಸಿ ೧೩

ಬರಲೆಚ್ಚರು ಮೆ-
ಯ್ಮರುಗುತೆ ಕಂಬನಿ-
ಗರೆಯುತೆ ನುಡಿದನು
ನರಪತಿಯಿಂತು ೧೪

"ಎನಿತಾದರು ಧನ-
ಕನಕವನೀವೆನು,
ಮುನಿವರ, ಕೊಡುವೆನು
ತನುಜನನೆಂತು ? ೧೫

"ಎನಗಾದರು ಮು-
ಪ್ಪಿನೊಳೀ ಮಕ್ಕಳು;
ಮನವೆಂತಹುದವ-
ರನು ಬಿಟ್ಟಿರಲು ? ೧೬

"ಎಳೆಯನು ರಾಮನು,
ಖಳರತಿಬಳರಾ-
ಖಳರೊಡನಿವನಿಗೆ
ಕೊಳಗುಳವೆಂತು ? ೧೭

"ಬರುವೆನು ನಾನಸು-
ರರನಿದಿರಿಸುವೆನು,
ಇರಿದವರನು ಸಂ-
ಹರಿಸುವೆನು, ಮುನೀ ೧೮

"ಕ್ರತುನಾಶಕರಪ-
ಕೃತಿಯನು ತಡೆವೆನು,
ಸುತನುಳಿಯಲಿ, ಮುನಿ-
ಪತಿ, ಕರುಣಿಪುದು !" ೧೯

"ಜನ ನಾಥನ ನುಡಿ-
ಯನು ಮುನಿಯಾಲಿಸಿ-
ದನು ಮರುನುಡಿದನು
ಮುನಿದಾತನಿಗೆ ೨೦

"ಅಣ್ಣನೆ ನುಡಿದೈ
ಬಣ್ಣದ ಮಾತನು

"ಕಣ್ಣೊಳಗೆರಚಿದೆ
ಮಣ್ಣನು ನೀನು ! ೨೧

"ಏನನೋ ಬೇಡಿದೆ-
ನೇನನೊ ನೀಡುವೆ !
ಮಾನದ ಬೆಲೆ ಗುಣ-
ಹೀನನಿಗೆಲ್ಲಿ ? ೨೨

"ಆರಿದ ಬಾಯಿಗೆ
ನಿರುಪಯೋಗವು;
ಕೋರನು ಮನುಜನು
ಬೇರಾವುದನು ೨೩

"ಅರಸನೆ, ನುಡಿದುದ
ತಿರುಗಿಸಿದವರಿಗೆ
ನರಕವೆ ಗತಿಯೆಂ-
ದರಿಯದಿರುವೆಯಾ? ೨೪

"ಶೂಲಿಯು ನೆನೆಯುತೆ
ಮೂಲೆಯಲಿರುವೆನು
ಕಾಲವುನನಗನು- ೨೫
ಕೂಲಿಸುವನಕ.

"ನುಡಿದಂತಾ ಮುನಿ
ನಡೆದೊಡನವನನು
ತಡೆದು ವಸಿಷ್ಠನು
ನುಡಿದನು ನೃಪಗೆ ೨೬

“ಸುರರಸುರರು ಗೆಲ
ಲರಿಯರು ರಾಮನ-
ನಿರೆ ರಕ್ಷಕನೀ-
ವರ ಮುನಿಯವನಾ ! ೨೭

“ಗುರುವಚನಾಂಜನ-
ವರಸನ ಕುರುಡನು
ಹರಿಯಿತು, ನುಡಿದನು
ಹರುಷದಲವನು. ೨೮

“ತನಯರು ಹೋಗಲಿ
ಮುನಿಯೊಡನಧ್ವರ-
ವನು ಕಾಯಲು ರಾ-
ಮನು ಲಕ್ಷ್ಮಣನು.” ೨೯

ಜನಪತಿ ನುಡಿದಿಂ-
ತನುನಯದಿಂದವ-
ರನು ಮುನಿಗೊಪ್ಪಿಸಿ-
ದನು, ಹರಸಿದನು. ೩೦

ಮಂದಸ್ಮಿತದಾ
ಸುಂದರ ವದನರು
ಬಂದರು ಜನನೀ
ಮಂದಿರದಲ್ಲಿ. ೩೧

ಎರಗಿದರಡ್ಡಾ-
ದರದಲಿ ಜನನೀ

ಚರಣಾಂಬುಜಕಾ-
ವರ ಬಾಲಕರು ೩೨

ಹರಕೆಯನವರಾಂ-
ತರು, ಹೊರಟರು ಮಂ-
ದಿರದಿಂದೈತಂ-
ದರು ರಿಸಿಯೆಡೆಗೆ ೩೩

"ಸುಕುಮಾರಾಂಗರು
ಸುಕೃತಿಗಳಾಕೌ-
ಶಿಕನೊಡನೈದಿದ-
ರಕುತೋಭಯರು. ೩೪

— ಸಾ. ರಾ.



# ಪರಿಚಯ

ಸಾಲಿ ರಾಮಚಂದ್ರರಾಯರು ಧಾರವಾಡದವರು. ಸುಪ್ರಸಿದ್ಧ ಕವಿಗಳು. ಶಿಕ್ಷಕರಾಗಿ ಕೆಲಸಮಾಡಿ ಈಗ ನಿವೃತ್ತರಾಗಿದ್ದಾರೆ. ವಾರ್ಧಿಕ ಷಟ್ಪದಿಯಲ್ಲಿ ಅನೇಕ ಭಾವಗೀತಗಳನ್ನು ಸುಂದರವಾಗಿ ಬರೆದಿದ್ದಾರೆ. ಹಳೆಯದನ್ನೇ ಹೊಸದಾಗಿ ನಿರೂಪಿಸುವ ಕೌಶಲ್ಯ ಇವರದಾಗಿದೆ. ಇವರು '**ಚಿತ್ರ-ಸೃಷ್ಟಿ**' ಎಂಬ ಗೀತಸಂಗ್ರಹವನ್ನು ಪ್ರಕಟಿಸಿದ್ದಾರೆ. ರಾಮಾಯಣವನ್ನು ಬಾಲಕರಿಗಾಗಿ ಹಾಡಿನ ರೀತಿಯಲ್ಲಿ ಚಿಕ್ಕ ಚಿಕ್ಕ ಪದ್ಯಗಳಾಗಿ ಬರೆಯಲು ಪ್ರಾರಂಭಿಸಿ ಬಾಲಕಾಂಡ ಅಯೋಧ್ಯಾಕಾಂಡಗಳನ್ನು ಪ್ರಕಟಿಸಿದ್ದಾರೆ. ಇವರ ಶೈಲಿಯಲ್ಲಿ ಸಂಸ್ಕೃತವು ಅಲ್ಲಲ್ಲಿ ವಿಶೇಷವಾಗಿ ಬಂದರೂ ತಿಳಿಗನ್ನಡದ ಸತ್ವವು ಅಲ್ಲಿದೆ ಇದರ ಬಗ್ಗೆ ಇನ್ನೂ ಕೆಲವು ಮಾತುಗಳನ್ನು 'ಸಾಹಿತ್ಯ ವಿಹಾರ-೨' ರಲ್ಲಿ ಓದಬಹುದು.

**ಕಥಾ ಸಂದರ್ಭ:—**

ರಾಮಾಯಣದ ಕಥೆಯನ್ನರಿಯದ ಹಿಂದುವಿಲ್ಲ. ಇಲ್ಲಿಯ ಕಥಾ ಭಾಗವು ಬಾಲಕಾಂಡದಲ್ಲಿಯ ಒಂದು ಘಟನೆ. ರಾಮ-ಲಕ್ಷ್ಮಣರು ದಶರಥರಾಯನ ಕಣ್ಬೆಳಕಾಗಿ, ಮನೆಯ ದೀಪವಾಗಿ ಬೆಳೆಯುತ್ತಿರುವಾಗ ಒಂದು ದಿನ ವಿಶ್ವಾಮಿತ್ರನು ಅರಸನಲ್ಲಿಗೆ ಬಂದು ತನ್ನ ಯಜ್ಞ ರಕ್ಷಣೆಗೆ ರಾಮ-ಲಕ್ಷ್ಮಣರನ್ನು ಕಳಿಸಿ ಕೊಡಲು ಪ್ರಾರ್ಥಿಸುತ್ತಾನೆ. ದಶರಥನ ಪುತ್ರ ವಾತ್ಸಲ್ಯವೂ, ರಾಮಲಕ್ಷ್ಮಣರ ಪರಾಕ್ರಮದ ಬಗ್ಗೆ ವಿಶ್ವಾಮಿತ್ರನ ವಿಶ್ವಾಸವೂ, ಶೀಘ್ರಕೋಪಿಯಾದ ವಿಶ್ವಾಮಿತ್ರ ದಶರಥರ ಸಂಭಾಷಣೆಯೂ ಸ್ವಾರಸ್ಯವಾಗಿ ಇಲ್ಲಿ ನಿರೂಪಿತವಾಗಿವೆ.

**ಟಿಪ್ಪಣಿ:—**

ತಾರಕ, ರಕ್ಷಕ; ಒಸಗೆ, ಸುದ್ದಿ; ಎಡರು, ತೊಂದರೆ, ಬಸವಳಿ,

ಖಿನ್ನನಾಗು; ಉಮ್ಮಳಿಸು, ದುಃಖಿಸು; ಕೊಳಗುಳ, ಯುದ್ಧ; ಮಖ, ಯಜ್ಞ; ಶೂಲಿ, ಶಿವ; ಕ್ರತು, ಯಜ್ಞ; ಅಧ್ವರ, ಯಜ್ಞ; ಅಕುತೋಭಯರು. ಯಾರಿಂದಲೂ ಅಂಜಿಕೆ ಇಲ್ಲದವರು.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

(೧) ವಿಶ್ವಾಮಿತ್ರನು ದಶರಥರಾಜನೆಡೆಗೆ ಬಂದ ಕಾರಣವೇನು ?

(೨) ರಾಮಚಂದ್ರನು ಎಂಥವನಿರುವನೆಂದು ವಿಶ್ವಾಮಿತ್ರನು ಹೇಳುತ್ತಾನೆ ?

(೩) ರಾಮನನ್ನು ವಿಶ್ವಾಮಿತ್ರನ ಸಂಗಡ ಕಳುಹಲು ದಶರಥನು ವಿಷಾದಗೊಳ್ಳುವ ಕಾರಣವೇನು ?

(೪) ದಶನಥನು ವಿಶ್ವಾಮಿತ್ರನ ಜೊತೆಗೆ ತಾನೇ ಬರುವೆನೆನ್ನಲು ವಿಶ್ವಾಮಿತ್ರನು ಏನೆಂದು ಮರುನುಡಿದನು?

(೫) ದಶರಥ ಮತ್ತು ವಿಶ್ವಾಮಿತ್ರರ ಸಂಭಾಷಣೆಯನ್ನು ಗದ್ಯದಲ್ಲಿ ಬರೆಯಿರಿ.

(೬) ಯಜ್ಞ—ಈ ಶಬ್ದಕ್ಕೆ ಬೇರೆ ಸಮಾನಾರ್ಥಕ ಶಬ್ದಗಳನ್ನು ಕೊಡಿರಿ.

**ಸ್ಪಷ್ಟೀಕರಿಸಿರಿ:—**

(೧) ಮಾಸಹ ಬೆಲೆ ಗುಣಹೀನನಿಗೆಲ್ಲಿ ?

(೨) ಅರಿದ ಬಾಯಿಗೆ ನಿರುಪಹೋಗವು.

---

# ೧೦ ಸೂರ್ಯೋದಯ

ಮೂಡುವನು ರವಿ ಮೂಡುವನು
ಕತ್ತಲೊಡನೆ ಜಗಳಾಡುವನು
ಮೂಡಣ ರಂಗಸ್ಥಳದಲಿ ನೆತ್ತರು
ಮಾಡುವನು, ಕುಣಿದಾಡುವನು

ಬೆಳಕಿನ ಕಣ್ಣುಗಳಿಂದಾ ಸೂರ್ಯನು
ನೋಡುವನು ಬಿಸಿಲೂಡುವನು
ಚಿಳಿಪಿಳಿ ಹಾಡನು ಹಾಡಿಸಿ ಹಕ್ಕಿಯ,
ಗೂಡಿನ ಹೊರ ಹೊರ ದೂಡುವನು.

ಬಂಗಾರದ ಚೆಲು ಬಿಸಿಲ ಕಿರೀಟದ
ಶೃಂಗಾರದ ತಲೆ ಎತ್ತುವನು !
ತೆಂಗಿನ ಕಂಗಿನ ತಾಳೆಯ ಬಾಳೆಯ
ಅಂಗಕೆ ರಂಗನು ಮೆತ್ತುವನು.

ಮಾಡಿನ ಹುಲ್ಲಲಿ ಚಿನ್ನದ ಗೆರೆಯನು
ಎಳೆಯುವನು ರವಿ ಎಳೆಯುವನು
ಕೂಡಲೆ ಕೋಣೆಯ ಕತ್ತಲೆ ಕೊಳೆಯನು
ತೊಳೆಯುವನು ರವಿ ಹೊಳೆಯುವನು.

ಮಲಗಿಪ ಕೂಸಿನ ನಿದ್ದೆಯ ಕಸವನು
ಗುಡಿಸುವನು, ಕಣ್ ಬಿಡಿಸುವನು.

ಹುಲುಗಿದ ಹೂವಿಗೆ ಪರಿ ಪರಿ ಬಣ್ಣವ
ಉಡಿಸುವನು ರವಿ ತೊಡಿಸುವನು.

ಏರುವನು ರವಿ ಏರುವನು
ಬಾನೊಳು ಸಣ್ಣಗೆ ತೋರುವನು
'ಏರಿದವನು ಚಿಕ್ಕವನಿರಬೇಕಲೆ'
ಎಂಬಾ ಮಾತನು ಸಾರುವನು.

—ಪಂಜೆ ಮಂಗೇಶರಾಯ



# ಪರಿಚಯ

"ಹಾಲುಸಕ್ಕರೆ ಬೆರಸಿ ನೀವಾದಿರಾಚಾರ್ಯ" ಎಂದು ಕವಿವರ್ಯ ಕೆ. ವಿ. ಪುಟ್ಟಪ್ಪನವರು ಪಂಜೆ ಮಂಗೇಶರಾಯರನ್ನು ಸರಿಯಾಗಿ ಕೊಂಡಾಡಿದ್ದಾರೆ ಕನ್ನಡ ಸಾಹಿತ್ಯಕ್ಕೆ ಇವರು ಆಚಾರ್ಯಪುರುಷರು ಮಕ್ಕಳ-ಗೀತಗಳ ಉದಯರಾಗವನ್ನೇ ಹಾಡಿದ ಸಾಹಿತ್ಯ-ವೈತಾಳಿಕರು. ಇವರು ಮಂಗಳೂರಿನವರು. ವಿದ್ಯಾಖಾತೆಯ ಅಧಿಕಾರಿಗಳಾಗಿ ಶಿಕ್ಷಣ ಪ್ರಪಂಚಕ್ಕೆ ಒಳ್ಳೆಯ ಸೇವೆಯನ್ನು ಸಲ್ಲಿಸಿದರು. ಮಕ್ಕಳ ಬೆಳವಣಿಗೆಯೇ ತಮ್ಮ ಜೀವನದ ದಿವ್ಯೋದ್ದೇಶವೆಂದು ನಂಬಿ ಅದಕಾಗಿಯೇ ಬಾಳಿ ಬೆಳಗಿದರು. 'ಕವಿಶಿಷ್ಯ' ಎಂಬ ಕಾವ್ಯನಾಮದಿಂದ ಬಲು ಚೆಲುವಾದ ಅನೇಕ ಕವನಗಳನ್ನೂ ಚಿಕ್ಕ ಚಿಕ್ಕ ಸ್ವಾರಸ್ಯಪೂರ್ಣವಾದ ಅನೇಕ ಮಕ್ಕಳ ಕತೆಗಳನ್ನೂ ಬರೆದಿದ್ದಾರೆ

ಸೂರ್ಯೋದಯದ ಚೆಲುವನ್ನು ಈ ಸುಂದರವಾದ ಗೀತದಲ್ಲಿ ಚೆನ್ನಾಗಿ ರೂಪಿಸಿದ್ದಾರೆ ಶಬ್ದಗಳ ಬೆಡಗೂ, ಅಲಂಕಾರದ ಸೊಬಗೂ ಸ್ಪಷ್ಟವಾಗಿ ವ್ಯಕ್ತವಾಗಿವೆ. ನಿರ್ಜೀವವಾದ ಸೂರ್ಯಬಿಂಬವನ್ನು ಮರೆಯಿಸಿ, ಅದೊಂದು ದೇವಪುರುಷನೆಂಬ ಚಿತ್ರವನ್ನು ಮೊದಲಿನಿಂದ ಕೊನೆಯವರೆಗೂ ಒಳ್ಳೇ ರೀತಿಯಿಂದ ಚಿತ್ರಿಸಿದ್ದಾರೆ.

**ಟಿಪ್ಪಣಿ:—**

ಊಡು, ಉಣಿಸು; ಕಂಗು, ಅಡಿಕೆ-ಗಿಡ, ಮಾಡ, ಹುಲ್ಲುಗದ್ದೆ; ಹುಲುಗು, ಹುದುಗು; ಮರೆಯಾದ, ಮುಚ್ಚಿದ; ಬಾನ, ಆಕಾಶ

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

(೧) ಸೂರ್ಯೋದಯದ ವೇಳೆಗೆ ನಾವು ಕಾಣುವ ದೃಶ್ಯಗಳಾವವು?

(೨) ಇಲ್ಲಿ ಸೂರ್ಯಬಿಂಬವನ್ನು ಒಂದು ವ್ಯಕ್ತಿಯಾಗಿ ಕಲ್ಪಿಸಿರುವದು ಯಾವ ಯಾವ ಶಬ್ದಗಳಿಂದ ಗೊತ್ತಾಗುವದು ?

(೩) ಒಂದನೆಯ ಮತ್ತು ಮೂರನೆಯ ಪದ್ಯಗಳಲ್ಲಿಯ ಕಲ್ಪನೆಯನ್ನು ಸುಲಭವಾದ ಶಬ್ದಗಳಲ್ಲಿ ಹೇಳಿರಿ.

(೪) ಶಬ್ದ ಮಾಧುರ್ಯವುಳ್ಳ ಕೆಲವು ಸಾಲುಗಳನ್ನು ಹೇಳಿರಿ.

(೫) 'ತಾಳ ಲಯವು ಗೀತದ ಒಂದು ವೈಶಿಷ್ಟ್ಯ' ತಾಳಲಯಬದ್ಧವಾಗಿ ಈ ಗೀತವನ್ನು ಹಾಡಿರಿ.

(೬) " ಏರಿದವನು ಚಿಕ್ಕವನಿರಬೇಕಲೆ ಎಂಬ ಮಾತನು ಸಾರುವನು " ಇದನ್ನು ಸ್ಪಷ್ಟೀಕರಿಸಿರಿ



# ೧೧. ಪತಿತ ಪಾವನ

“ಪತಿತಪಾವನ” ಬಿರುದು ನಿನಗೆ ಸಲ ಬೇಕೆಂದು
ಪತಿತರಾಗಿಯೆ ನಮ್ಮವರು ಬಾಳಬೇಕೇ ?
ಬಿರುದುಗಳ ಮೋಹವನು ಮಾನವರೆ ತೊರೆದಿರಲು,
ಪರಮ ಪುರುಷನಿಗೇಕೆ ಬಿರುದಿನಗ್ಗಳಿಕೆ ?

ಲೋಕಕಲ್ಯಾಣವಾಗುವ ತೆರದಿ ಸಾಕ್ಷಿ, ನಿ-
ನ್ನಾ ಕಣ್ಣಿಗೆವೆಯಿಲ್ಲ, ತೆರೆದ ಕಣ್ಣವನೇ !
ಮುಚ್ಚಲಾರದ ಕಣ್ಣ ಮುಚ್ಚುವೆಯೋ ನಮ್ಮ ಕ-
ಣ್ಣಿಗಿಚ್ಚು ತಾಗುವುದೇನು ದುರ್ಭಾವನೆ !

ಸಾಮಿಪ್ಯ ಸಾಲೋಕ್ಯ ಪದವಿಗಳ ಭಕ್ತರಿಗೆ
ಸೇವಿಸುವ ಪರದೈವ, ನಿನ್ನ ಬಿಂಬವನು
ಕತ್ತಲಿನ ಗುಡಿಯೊಳಗೆ ಬಚ್ಚಿಟ್ಟಿಹರು; ನಾವು
ಅತ್ತ ಸುಳಿದರೆ ನಿನ್ನ ಮೈಗೆಡುವುದೇನು ?

ಭಕ್ತರಿಗೆ ತನ್ನ ತೆತ್ತಿಹುದೆ ನಿನ್ನಯ ಬಾಳ್ಕೆ;
ಅತ್ತ ಸುಳಿಯಲು ಬಾರದೆನ್ನ ಗುಡಿಸಲಿಗೆ—
ಪದ ದಲಿತ ಬಲಿಯ ಪಾತಾಳದರಮನೆ ಕಾಯ್ವ
ಮುದದೋರಿ-ಬಾ, ದಲಿತನೆನ್ನ ಬಾಗಿಲಿಗೆ !

ಪಿರಿಯ ಕತ್ತಲಕೋಣೆ ದೇಗುಲವ ತೋರೆ; ನಮ್ಮ
ಮುರಿದ ಪೂಜಾರಿಯನು ತೊಲಗಿ ಬಾರಿತ್ತ;

ನೀನಿರದೆ ಒಕ್ಕಲಿಲ್ಲದ ನನ್ನ ಹೃದಯದಲಿ
ಸಾನುರಾಗದಿ ಸುಳಿದು ಬೆಳಕ ಬೀರಿಸ್ತು !
ಕೊಳೆಯಲ್ಲಿ ಬೆಳೆದಿರುತ, ಕೊಳೆ ತೊಳೆವ ಪಾಡೆವಗೆ,
ಮಲಿನತೆಯ ನಿರ್ಮೂಲನಕೆ ಜನ್ಮವೆತ್ತಿ;

ಹೊರಗೆ ಕೈಕೊಳೆ ಮೆತ್ತಿದರು, ಒಳಗೆ ನೀ ಜೀವಾಳ;
ಶರಣು,—ಪಾವನ ನಿರಂಜನ ನಿತ್ಯ ಜ್ಯೋತಿ !

— ಎಮ್. ಎನ್. ಕಾಮತ.



# ಪರಿಚಯ

ದಿವಂಗತ ಶ್ರೀ ಎಮ್. ಎನ್. ಕಾಮತ್ ಅವರು ಮಂಗಳೂರಿನವರು ಘನವಿದ್ವಾಂಸರು. ಒಳ್ಳೆಯ ಕವಿಗಳು. ಮಕ್ಕಳ ಸಾಹಿತ್ಯದ ಅಭಿವೃದ್ಧಿಗಾಗಿ ಶ್ರೀ ಪಂಜೆಯವರೊಂದಿಗೆ ತುಂಬಾ ಶ್ರಮವಹಿಸಿ ದುಡಿದವರು. ಇವರ ಅನೇಕ ಗೀತಗಳು ಮಂಗಳೂರಿನ ಎಲ್ಲ ಪಠ್ಯಪುಸ್ತಕಗಳಲ್ಲಿ ತಮ್ಮದೊಂದು ಸ್ಥಿರವಾದ ಸ್ಥಾನವನ್ನು ಪಡೆದುಕೊಂಡಿವೆ.

ದೇವರ ದರ್ಶನಕ್ಕಾಗಿ ಆತುರಗೊಂಡ ಅಸ್ಪೃಶ್ಯನ ಅಂತಃಕರಣದ ತಳಮಳವನ್ನು ಕವಿಯು ವ್ಯಂಗ್ಯವಾಗಿ ಮನಮುಟ್ಟುವಂತೆ ವ್ಯಕ್ತಗೊಳಿಸಿದ್ದಾನೆ.

**ಟಿಪ್ಪಣಿ:—**

ಅಗ್ಗಳಿಕೆ, ದೊಡ್ಡಸ್ತಿಕೆ; ತೆರೆದ ಕಣ್ಣವ, ದೇವ; (ದೇವರು ಕಣ್ಣು ಪಿಳಿಕಿಸುವದಿಲ್ಲವೆಂದು, ದೇವತೆಗಳಿಗೆ 'ಅನಿಮಿಷರು' ಎಂಬು ಹೇಳುತ್ತಾರೆ.) ಸಾಮೀಪ್ಯ, ಸಾಲೋಕ್ಯ ಇವು ಮೋಕ್ಷದ ಪ್ರಕಾರಗಳು ಇದರಂತೆ ಸಾರೂಪ್ಯ ಮತ್ತು ಸಾಯುಜ್ಯ ಎಂಬ ಇನ್ನೂ ಎರಡು ಪ್ರಕಾರಗಳಿರುತ್ತವೆ; ಸಾನುರಾಗ, ಪ್ರೀತಿ.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ:—**

(೧) ಈ ಕವಿತೆಯಲ್ಲಿ ಕವಿಯ ಎಂಥ ಮನಸ್ಥಿತಿ ವ್ಯಕ್ತವಾಗುತ್ತದೆ?

(೨) ಕವಿಯು ದೇವರನ್ನು ಹೇಗೆ ಹೇಗೆ ತೆಗಳಲು ಯತ್ನಿಸಿದ್ದಾನೆ?

(೩) ಕವಿಯು ದೇವರಿಂದ ಏನನ್ನು ಅಪೇಕ್ಷಿಸುತ್ತಾನೆ?

(೪) ಕೊನೆಯ ಎರಡು ಸಾಲುಗಳಲ್ಲಿಯ ಅರ್ಥವನ್ನು ಸ್ಪಷ್ಟೀಕರಿಸಿರಿ.

(೫) "ಪದದಲಿತ ಬಲಿಯ ಪಾತಾಳದರಮನೆ ಕಾಯ್ವ" ಈ ಸಾಲಿನಲ್ಲಿ ಅಡಕವಾಗಿರುವ ಕಥೆಯನ್ನು ವಿಸ್ತರಿಸಿ ಬರೆಯಿರಿ.

# ಒಂದು ರಾತ್ರಿ

ತಿಳಿಮುಗಿಲ ತೊಟ್ಟಿಲಲಿ
ಮಲಗಿದ್ದ ಚಂದಿರನ
ಗಾಳಿ ಜೋಗುಳ ಹಾಡಿ
ತೂಗುತಿತ್ತು

ಗರಿ ಮುದುರಿ ಮಲಗಿದ್ದ
ಹಕ್ಕಿಗೂಡುಗಳಲ್ಲಿ
ಇರುಳು ಹೊಂಗನಸೂಡಿ
ಸಾಗುತಿತ್ತು.

ಮುಗುಳಿರುವ ಹೊದರಿನಲಿ
ನರುಗಂಪಿನುದರದಲಿ
ಜೇನುಗನಸಿನ ಹಾಡು
ಕೇಳುತಿತ್ತು

ತುಂಬುನೀರಿನ ಹೊಳೆಯೊ
ಳಂಬಿಗನ ಕಿರುದೋಣಿ
ಪ್ರಸ್ಥಾನಗೀತೆಯನು
ಹೇಳುತಿತ್ತು.

ಬರುವ ಮುಂದಿನ ದಿನದ
ನವನವೋದಯಕಾಗಿ

ಪ್ರಕೃತಿ ತಪವಿರುವಂತೆ
ತೋರುತಿತ್ತು.

ಶಾಂತ ರೀತಿಯೊಳಿರುಳು
ಮೆಲ್ಲಮೆಲ್ಲನೆ ಉರುಳಿ
ನಾಳಿನ ಶುಭೋದಯವ
ಸಾರುತಿತ್ತು.

— ಎಸ್. ವ್ಹಿ. ಪರಮೇಶ್ವರಭಟ್ಟ



# ಪರಿಚಯ

ಎಸ್. ವ್ಹಿ. ಪರಮೇಶ್ವರಭಟ್ಟರು ಸುಪ್ರಸಿದ್ಧ ಕವಿಗಳೂ ದೊಡ್ಡ ವಿದ್ವಾಂಸರೂ ಆಗಿದ್ದಾರೆ ಇವರು ತುಮಕೂರಿನವರು. ಸಂಸ್ಕೃತದ ಉತ್ತಮವಾದ ಕಾವ್ಯಗಳನ್ನು ಕನ್ನಡಕ್ಕೆ ಪರಿವರ್ತಿಸಬೇಕೆಂಬ ಮಹತ್ವಾಕಾಂಕ್ಷೆ ಇವರಿಗೆ. ಆ ಯೋಗ್ಯತೆಯೂ ಇವರಿಗಿದೆ. ಈಗಾಗಲೇ ಇವರ 'ಮೇಘದೂತ'ವು ಜನಪ್ರಿಯವಾಗಿದೆ. ಇತ್ತೀಚಿಗೆ ಕಾಳಿದಾಸ ಮಹಾಕವಿಯ 'ಋತುಸಂಹಾರ'ವನ್ನೂ ಪರಿವರ್ತಿಸಿ ಪ್ರಕಟಿಸಿದ್ದಾರೆ.

"ವಿರಹಿಣಿ" ಎಂಬ ಇವರ ಭಾವಗೀತಗಳ ಸಂಗ್ರಹವೂ ಈ ಮೊದಲೇ ಪ್ರಕಟವಾಗಿದೆ. ಇವರ ಶೈಲಿಯು ಗಂಭೀರವೂ, ಪ್ರೌಢವೂ ಆಗಿರುತ್ತದೆ.

ಈ ಗೀತವನ್ನು ಇವರ 'ವಿರಹಿಣಿ' ಎಂಬ ಕವನ-ಸಂಗ್ರಹದಿಂದ ಆರಿಸಿಕೊಂಡಿದೆ. ಇರುಳಿನ ಗಂಭೀರತೆಯನ್ನೂ ಚೆಲುವಿಕೆಯನ್ನೂ ಸರಾಗವಾಗಿ ರೂಪಿಸಿದ್ದಾರೆ. ಇರುಳಿನಲ್ಲಿ ಕಂಡುಬರುವ ಅನೇಕ ದೃಶ್ಯಗಳನ್ನು ಅಲಂಕಾರಪೂರ್ಣವಾಗಿ ಚಿತ್ರಿಸಿದ್ದಾರೆ.

**ಟಿಪ್ಪಣಿ.—**

ಊಡು, ಉಣಿಸು; ನರುಗಂಪು, ಸುವಾಸನೆ;

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ:—**

(೧) ರಾತ್ರಿಯ ಸೊಬಗನ್ನು ತೋರಿಸುವ ದೃಶ್ಯಗಳು ಯಾವವು?

(೨) ಈ ಕವಿತೆಯಲ್ಲಿಯ ಶಬ್ದ ಚಿತ್ರಗಳನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

(೩) ಕಡೆಯ ಎರಡು ಪದ್ಯಗಳಲ್ಲಿರುವ ಅರ್ಥವನ್ನು ಸ್ಪಷ್ಟೀಕರಿಸಿರಿ.

(೪) ಟಿಪ್ಪಣಿ ಬರೆಯಿರಿ:—

(೧) ಹೊಂಗನಸು (೨) ತಿಳಿಮುಗಿಲ ತೊಟ್ಟಿಲು (೩) ಪ್ರಸ್ಥಾನ ಗೀತೆ.

**ಹೆಚ್ಚಿನ ಓದು:—**

ಕವಿವರ್ಯ ಬೇಂದ್ರೆಯವರ 'ಬೆಳಗು' ಎಂಬ ಗೀತವನ್ನು ಓದಿರಿ.

# ೧೩ ಸುನೀತನ ಗೀತೆ

—:o:—

ಗುರುವಿನ ಮಹಿಮೆಯ ಹೊಗಳುವ ಗೀತಾ
ಇದ ಹಾಡಿದನು ಸುನೀತಾ.
ಮಗಧರ ನಗರಿ ರಾಜಗೃಹದಲಿ
ಬೀದಿಯ ಕಸವನು ಗುಡಿಸುವನವನು
ಕೀಳು ಜಾತಿಯಲಿ ಕೀಳು ಜನದಲಿ
ಹುಟ್ಟಿ ಬೆಳೆದುದು ಅವನದು ಹವಣು.
ಮೈ ಕೈ ಧೂಳು ಉಂಬುದು ಕೂಳು
ಉಡುವುದು ಚಿಂದಿ ಹರಕು ಹಾಳು
ಬಿಸಿಲು ಬೇಡವೆನೆ ಮರಗಳ ನೆರಳು
ಮಳೆಗಂಜಿದನೇ ಕಾಡಿನ ಗುಡಿಸಲು
ರುಚಿಸಬೇಕೆಂದೆನೆ ತೋಪಿನ ಮಾವು
ಸೋತು ಮಲಗುವದೆ ಭೂಮಿಯ ಮಡಿಲು
ಬೀದಿಯ ಕಸವನು ಗುಡಿಸುವನವನು
ಕಷ್ಟದಿ ಬೆಳೆದುದೆ ಅವನದು ಹವಣು
ಬಹುಜನ ಹಿರಿಯರು ಬಹುಜನ ಪೂಜ್ಯರು
ಸಾವಿರ ಜನ ಮಹನೀಯರವನಿಗೆ
ಶರಣು ಶರಣು ಎಂದುದು ಆ ಗುಡಿಲು
ರಾಜಾಲಯಕೆ ಮಾಡಕೆ ಮನೆಗೆ

ದೂರದಿ ಬಗ್ಗಿ ಅವನಿರೆ ತಗ್ಗಿ
ಮುಂದಕೆ ಹೋಹರು ಹಿರಿಯರು ಹಿಗ್ಗಿ
ಯಾರೂ ಸುಳಿಯದ ತಾಣದಿ ಕುಳ್ಳಿರೆ
ಅದೆ ಅವನಿಗೆ ಮರ್ಯಾದೆಯು ತಾವು
ಸಾಲ್ಮರದಡಿಯನು ಗುಡಿಸುವ ವೇಳೆ
ಅದರಿಂದುದುರಿದ ಹೂವೇ ಹೂವು
ಗುಡಿಲಿನ ದೇಹದಿ ಬಾಳುತ ಜೀವ
ಸವಿದಿತು ದಿನವೂ ದೈನ್ಯದ ನೋವ
ಬೆಲೆ ಬಾಳದ ಬಾಳುವೆಯನು ಇಂತು
ನಡೆಸಿರಲವನು ರಾಜಗೃಹದಲಿ
ಕಸವನು ಗುಡಿಸುತ ಕಸವೇ ಆಗಿ
ಕಸಕೂ ಕಡಿಮೆ ಅಧಮರ ಮೂದಲಿ
ಬಂದಿತು ಕಾಲ ಹರಿಯಿತು ಸಾಲ
ಕಂಡನು ಅವನೂ ಬಾಳಿನ ಮೇಲ
ಸಾವಿರ ಶ್ರವಣರು ಹಿಂಗಡೆ ಬರುತಿರೆ
ಹೊಕ್ಕನು ನಗರಿಯ ರಾಜರ ರಾಜ
ಬುದ್ಧಗುರುವಿನಾ ಮುಖದಲಿ ನೋಡು
ಚಂದ್ರನ ಕಾಂತಿ ಸೂರ್ಯನ ತೇಜ
ಬಂದನು ಎಲ್ಲಾ ಜೀವದ ಬಂಧು
ಬಂದನು ಅಪಾರ ಕರುಣಾ ಸಿಂಧು
ಲಕ್ಷಾಧೀಶರು ಕೋಟಿಯಧೀಶರು
ನಗರಾಧಿಪ ಮಾಂಡಲಿಕರು ಮಲ್ಲರು

ಮಂತ್ರಿ ಮಹಾಮಾತ್ಯರು ಸತ್ಪಾತ್ರರು
ಎದುರುಗೊಂಡರು ಉಚಿತದೊಳೆಲ್ಲರು
ಬಾಂಗುಡಿ ತೋರಣ ತೇಜೀವಾರಣ
ಹೆಸರನು ಹೊಗಳುವ ವಂದಿ ಚಾರಣ
ಇರ್ಕಡೆಯಲಿ ಇವರೆಲ್ಲರು ನಿಂದಿರೆ
ಮಧ್ಯದಿ ನಡೆಯುತ ಬಂದರು ತಂದೆ
ಬರವನು ನೋಡುತ ಮನೆಗಳ ಮುಂಗಡೆ
ಹರುಷದಿ ನಿಂತಿತು ನಗರದ ಮಂದಿ
ನಾನೂ ದಾರಿಯ ಬದಿಯಲಿ ನಿಂತೆ
ನೋಡಿದೆ ಗುರುವನು ಹರಿಯಿತು ಚಿಂತೆ
ಮೊಗದಲಿ ತೊಳಗಿದ ಕರುಣೆಯ ನೋಡಿ
ತೋರಿತು ಯಾವುದೊ ಪ್ರೇಮದ ಸಲಿಗೆ
ಹೊರಳಿತು ಒಳಗು ಎಂತೋ ಆಯಿತು
ಹಾವಿನ ತೆರದಲಿ ಹರಿದೆನು ಬಳಿಗೆ
ನೆಲದಲಿ ಕೆಡೆದೆನು ಪಾದವ ಹಿಡಿದು
ಅರ್ಥವ ಕಾಣದ ನುಡಿಯನು ನುಡಿದು
ಉದಯದೊಳೆಲ್ಲಿಯೋ ಸಾರಿದ ತಾಯ
ಸಂಜೆಗೆ ನೋಡಿದ ಕಂದನ ರೀತಿ
ಕಣ್ಣೀರುಕ್ಕಿರೆ ನೋಡಿದೆನವರನು
ಇಲ್ಲವಾಯ್ತು ಮಡಿ ಮೈಲಿಗೆ ನೀತಿ
ಹಾ! ಎಂದರು ಜನ ಬಿಡಿಸಲು ಬಂದರು
ಗುರುದೇವರು ಬಿಡಿ ಬಿಡಿ ಇರಲೆಂದರು

ಬಿಡಿಸಲ ಬಂದವರನು ತಡೆಯುತ್ತ
ಗುರುದೇವರು ಹಿಡಿದೆತ್ತಿದರೆನ್ನ
ಕಣ್ಣೀರನು ಕಿರುಬೆರಳಿಂದೊರಸಿ
ಕೆಂದಳಿರಂದದ ಕೈಯಲಿ ಬೆನ್ನ
ತಡವಿದರಯ್ಯ ಮೈಯ್ಯಿಗೆ ಮೈಯ್ಯ
ಸೋಕಿಸಿ ನಿಂತರು ಇಲ್ಲ ಅಸಹ್ಯ
ದೇವಾ ನಿಮ್ಮನು ಮುಟ್ಟಿದೆನಲ್ಲಾ
ಎನ್ನುತ ನಾನು ಕಾತರ ನುಡಿಯೆ
ಮೆಲ್ಲನೆ ನಕ್ಕರು ಹಣತೆಗೆ ಜಿಡ್ಡೆನೆ
ಜಿಡ್ಡೇ ಎಣ್ಣೇ ದೀಪದ ಕುಡಿಗೆ ?
ಪಾವನನಾದೆನು ಅಂದು ಸುನೀತಾ
ಗುರುವರನುಡಿಯನು ಸೋಂಕಿ ಪುನೀತಾ
ಜೊತೆಯಲಿ ನಡೆದೆನು ಆ ದಿನವೆಲ್ಲಾ
ಕಲಿಸಿದರಂದೇ ತತ್ವದ ಪರಿಯ
ಮನಸಿನ ಕಣ್ಣಿನ ಎವೆಯನು ಬಿಡಿಸಿ
ಸೆಳೆದರು ಹಾಹೆಯು ಮರಸಿದ ತೆರೆಯ
ಸಲಹಲು ತಂದೆ ಬದುಕಿದನಂದೇ
ಇನ್ನೀ ಜೀವಕೆ ಕೊರೆಯೆ ಕುಂದೆ
ಮೂರು ಲೋಕವಲಿ ಬಾಳುವ ಬಾಳೂ
ಅಂದಿನ ಇರುಳಿನ್ನೆದುರಲಿ ಹರಿಯುತು
ಇಂದ್ರಾಗ್ನಿ ಮಾರುತ ವರುಣ ನಿಋಋತಿ
ಎಲ್ಲ ದೇವಗಣ ಬಳಿಯಲಿ ನೆರೆಯಿತು

ವಿಶ್ವಜೀವನಾಬ್ಧಿಯ ವೃಕ್ಷದಲಿ
ಅಲೆತೇಲಿದೆನು ಅಥವಾರ ಪೊದಲಲಿ
ಉಳಿದವರಿಗೆನಿತೋ ವರುಷದ ಮೇಲೆ
ದೊರೆಯುವ ತಪಸಿನ ಫಲವನು ನನಗೆ
ಗುರು ಒಂದೇ ದಿನದಲಿ ನೀಡಿದರು,
ಮನಸು ಮಾಡಿದರೆ ಕಷ್ಟವೆ ಧಣಿಗೆ
ಗುಡಿಸಿದ ಕಸವು ಸಹಿಸಿದ ಹಸಿವು
ಆಯಿತು ಆತ್ಮದ ಖಡ್ಗಕೆ ಮಸೆವು
ಗುರುವಿನ ಕೃಪೆಯಿಂದೊದವಿದ ತಿಳಿವು
ಬೇಸಗೆ ಹರಿಯದ ಪ್ರಭೆಯೊನೆ ಬೆಳೆಯ್ರೆ
ಹೊರೆಯಾಗಿಹ ಹಾವಿನ ಪೊರೆಯಂತೆ
ದೀನ ಕೃಪಣತೆಯನೆಲ್ಲವ ಸುಲಿಯೆ
ಲೋಕದ ಜೀವನವೇ ನಾನಾದೆ
ಹರಿಯಿತು ನಾನು ಎನ್ನುವ ಬಾಧೆ
ಜಯವಾಗಲಿ ಗುರುವರ ಬುದ್ಧನಿಗೆ
ಜಯ ಅರಗುವರಗೆ ಸಿದ್ಧಾರ್ಥನಿಗೆ
ಜಯವಾಗಲಿ ಅಂತ್ಯಜ ಭ್ರಾತೃವಿಗೆ
ವಿಶ್ವ ಪ್ರೇಮದ ಜೀವನ್ಮಣಿಗೆ
ಜಯ ಗುರುದೇವ ದೀನರ ಕಾವ
ಜಯ ಜಯ ನನ್ನ ಜೀವದ ಜೀವ
ಎಲ್ಲೆಡೆ ಹರಡಲಿ ನಿನ್ನುಪದೇಶ
ಹರಿಯಲಿ ಎಲ್ಲಾ ಮನಸಿನ ಭ್ರಾಂತಿ

ಎಲ್ಲೆಡೆ ಅರಳಲಿ ತಿಳಿವಿನ ಮೊಗ್ಗು
ಎಲ್ಲಾ ಹೃದಯದಿ ತೊಳಗಲಿ ಶಾಂತಿ
ಜಯ ಶಾಕ್ಯ ಸಿಂಹ ಜಯ ಮೌನಿವರ
ಜಯಗುರುದೇವ ಭವಭೀತಿಹರ.

-ಶ್ರೀನಿವಾಸ



# ಪರಿಚಯ.

ಮಾಸ್ತಿ ವೆಂಕಟೇಶ ಅಯ್ಯಂಗಾರರು, 'ಶ್ರೀನಿವಾಸ' ಎಂಬ ಮುಚ್ಚು ಹೆಸರಿನಿಂದ ಸಾಹಿತ್ಯದಲ್ಲಿ ಚಿರಪರಿಚಿತರಾಗಿದ್ದಾರೆ. ಇವರು ಮೊದಲು ಮೈಸೂರ ಸರಕಾರದ ಕಂದಾಯದ ವಿಭಾಗದಲ್ಲಿ ಕಮಿಶನರರಾಗಿದ್ದು ಈಗ ನಿವೃತ್ತರಾಗಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದು, ಕನ್ನಡದ ಪ್ರಚಾರಕ್ಕಾಗಿ ಅವಿಶ್ರಾಂತವಾಗಿ ದುಡಿಯುತ್ತಲಿರುವರು. ಇವರು 'ಮಲಾರ' 'ಬಿನ್ನಹ' 'ಅರುಣ' 'ತಾವರೆ' 'ಚೆಲುವು' ಮೊದಲಾದ ಕಾವ್ಯ-ಸಂಗ್ರಹಗಳನ್ನೂ 'ಮಂಜುಳಾ' 'ಯಶೋಧರಾ' 'ತಿರುಪಾಣಿ' ಮೊದಲಾದ ನಾಟಕಗಳನ್ನೂ, 'ಕೆಲವು ಸಣ್ಣ ಕತೆಗಳು' 'ನಾಲ್ಕು ಸಣ್ಣ ಕತೆಗಳು' ಮೊದಲಾದ ಸಣ್ಣ ಕತೆಗಳ ಸಂಗ್ರಹಗಳನ್ನೂ, ಅನೇಕ ವಿಮರ್ಶಾತ್ಮಕ ಲೇಖನಗಳನ್ನೂ ಬರೆದಿದ್ದಾರೆ ಇವರ 'ಕನ್ನಡ ಜನತೆಯ ಸಂಸ್ಕೃತಿ' ಎಂಬುದು 'ಪಾಪ್ಯುಲರ ಕಲ್ಚರ್ ಇನ್ ಕರ್ನಾಟಕ' ಎಂದು ಇಂಗ್ಲೀಷಿನಲ್ಲಿಯೂ ಪ್ರಸಿದ್ಧವಾಗಿದೆ. ಕಥನ ಕವನಗಳು ಇವರ ಸಾಹಿತ್ಯದ ಮುಖ್ಯ ಅಂಗವಾಗಿವೆ.

ಕಾವ್ಯ, ಕತೆ, ನಾಟಕ, ವಿಮರ್ಶೆ ಯಾವುದನ್ನು ಬರೆದರೂ, ಇವರದೇ ಆದ ಒಂದು ತಿಳಿಯಾದ, ವಿನೋದಮಯವಾದ, ಸಹಜ ಸುಂದರವಾದ ಶೈಲಿಯನ್ನು ಕಾಣಬಹುದು ಹೊಸಗನ್ನಡ ಸಾಹಿತ್ಯದ ಆಚಾರ್ಯ ಪುರುಷರಲ್ಲಿ ಇವರೊಬ್ಬರು.

ಇದೊಂದು ಕಥನಕವನ ಕಥೆ ಹೇಳುವವರಲ್ಲಿ ಶ್ರೀಮಾಸ್ತಿಯವರು ಅನುಪಮರು. ಅವರದೇ ಆದ ಸರಲತೆ, ಗಂಭೀರತೆ, ರಂಜಕತೆ ಇದರಲ್ಲಿ ತುಂಬ ತುಂಬಿ ಬಂದಿವೆ. ಅಸ್ಪೃಶ್ಯೋದ್ಧಾರದ ಸುಂದರವಾದ ಈ ಪೌರಾಣಿಕ ಕಥೆಯನ್ನು ಇಂದಿನ ಪ್ರಸಂಗಕ್ಕೆ ತಕ್ಕಂತೆ ಮನದಟ್ಟಾಗುವಂತೆ, ನಿರೂಪಿಸಿದ್ದಾರೆ. ಅಲ್ಲಲ್ಲಿ ನೀತಿಯ ಮಾತುಗಳೂ, ಬುದ್ಧದೇವನ ಸ್ತುತಿಯೂ ಕತೆಗೆ ಹೆಚ್ಚಿನ ಸೊಬಗನ್ನೂ, ಗಂಭೀರತೆಯನ್ನೂ ತಂದುಕೊಟ್ಟಿವೆ.

**ಟಿಪ್ಪಣಿ:**

ಹವಣು, ರೀತಿ; ಗುಡಿಲು, ಗುಡಿಸಲು; ತಡವು, ಮುಟ್ಟು; ಮಾಡ, ದೊಡ್ಡಮನೆ; ಹಾಹೆ, ಪಾಪ್ರ [ ಕಣ್ಣುಗುಡ್ಡೆ ]; ನಿಮುಖಾತಿ, [ನಿರ್ಋತಿ] ಅಷ್ಟದಿಕ್ಪಾಲಕರಲ್ಲಿ ಒಬ್ಬ; ಧಣಿ, ಒಡೆಯ; ಶ್ರವಣರು, ಜೈನಯತಿಗಳು.

**ಅಭ್ಯಾಸ:—**

### ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

(೧) ಕಸಗೂಡಿಸುವವನ ಜೀವನವನ್ನು ನಿಮ್ಮ ಶಬ್ದಗಳಲ್ಲಿ ಚಿತ್ರಿಸಿರಿ.

(೨) ಬುದ್ಧ ಗುರುಗಳ ಆಗಮನದ ವೇಳೆಗೆ ಜನರಲ್ಲಿ ಕಂಡು ಬಂದ ಸಂಭ್ರಮವನ್ನು ವರ್ಣಿಸಿರಿ.

(೩) ಬುದ್ಧ ಗುರುಗಳನ್ನು ನೋಡಿ ಸುನೀತನು ಏನು ಮಾಡಿದನು?

(೪) ಬುದ್ಧ ಗುರುಗಳನ್ನು ಅಂತ್ಯಜಭ್ರಾತೃವೆಂದು ಸುನೀತನು ಏಕೆ ಬಗೆದನು ?

(೫) ಬುದ್ಧಗುರುಗಳ ಪ್ರೇಮವು ಸುನೀತನ ಮನಸ್ಸಿನ ಮೇಲೆ ಯಾವ ಪರಿಣಾಮವನ್ನುಂಟು ಮಾಡಿತು ?

(೬) ಸುನೀತನು ಬುದ್ಧಗುರುಗಳನ್ನು ಯಾವ ಶಬ್ದಗಳಿಂದ ಹೊಗಳಿದ್ದಾನೆ ? ಅದು ಏಕೆ ?

(೭) " ದೇವಾ ನಿಮ್ಮನ್ನು ಮುಟ್ಟಿದೆನಲ್ಲಾ" ಈ ವಾಕ್ಯವನ್ನೋದಿ ನಿಮ್ಮ ಮನಸ್ಸಿನಲ್ಲಿ ಯಾವ ವಿಚಾರಗಳು ಬರುತ್ತವೆ ?

(೮) 'ಅಸ್ಪೃಶ್ಯೋದ್ಧಾರ' ಎಂಬ ವಿಷಯದ ಮೇಲೆ ಒಂದು ನಿಬಂಧವನ್ನು ಬರೆಯಿರಿ.

ಸ್ಪಷ್ಟೀಕರಿಸಿರಿ: —

(೧) ಯಾರೂ ಸುಳಿಯದ ತಾಣದೆ ಕುಳ್ಳಿರೆ
ಅದೆ ಅವನಿಗೆ ಮರ್ಯಾದೆಯ ತಾವು.

(೨) ……………… .. …ಹಣತೆಗೆ ಜಿಡ್ಡನೆ
ಜಿಡ್ಡೇ ಎಣ್ಣೇ ದೀಪದ ಕುಡಿಗೆ ?

(೩) ಕಲಿಸಿದರಂದೇ ತತ್ವದ ಪರಿಯ
ಮನಸಿನ ಕಣ್ಣಿನ ಎವೆಯನು ಬಿಡಿಸಿ.

(೪) ಗುಡಿಸಿದ ಕಸವು ಸಹಿಸಿದ ಹಸಿವು
ಆಯಿತು ಆತ್ಮದ ಖಡ್ಗಕೆ ಮಸೆವು

(೫) ಎಲ್ಲೆಡೆ ಹರಡಲಿ ನಿನ್ನುಪದೇಶ
ಹರಿಯಲಿ ಎಲ್ಲಾ ಮನಸಿನ ಭ್ರಾಂತಿ.



## ೧೪ ಶಾನುಭೋಗರ ಮಗಳು

ಶಾನುಭೋಗರ ಮಗಳು, ತಾಯಿಯಿಲ್ಲದ ಹುಡುಗಿ,
ರತ್ನದಂತಹ ಹುಡುಗಿ ಊರಿಗೆಲ್ಲ !
ಬಲು ಜಾಣೆ, ಗಂಭೀರೆ, ಹೆಸರು ಸೀತಾದೇವಿ;
ಹನ್ನೆರಡು ತುಂಬಿಹುದು, ಮದುವೆಯಿಲ್ಲ.

ತಾಯಿಯಿಲ್ಲದ ಹೆಣ್ಣು, ಮಿಂಚ ಬೀರುವ ಕಣ್ಣು
ಒಮ್ಮೊಮ್ಮೆ ಕಣ್ಣೀರ ಸರಸಿಯಹುದು;
ತಾಯಿಯಂದದಿ ಬಂದು ತಂಪನೆರೆಯುವದೆಂದು
ಇಂಥ ಬಾಳಿಗೆ ಒಲವೆ ನಿನ್ನ ಕನಸು ?

ಹತ್ತಿರದ ಕೆರೆಯಿಂದ ತೊಳೆದ ಬಿಂದಿಗೆಯೊಳಗೆ
ನೀರ ತರುವಾಗವಳ ನೋಡಬೇಕು
ಕರುವನಾಡಿಸುವಾಗ ಮಲ್ಲಿಗೆಯ ಬನದೊಳಗೆ
ಅವಳ ಗಂಡನ ಹೆಸರು ಕೇಳಬೇಕು !

ಮೊನ್ನೆ ತಾವರೆಗೆರೆಯ ಜೋಯಿಸರ ಮೊಮ್ಮಗನು
ಹೆಣ್ಣ ನೋಡಲು ಬಂದನವರ ಮನೆಗೆ
"ವೈದಿಕರ" ಮನೆಗಳಲಿ ಊಟ ಹೊತ್ತಾಗುವದು;
ಒಲ್ಲೆನೆಂದಳು ಸೀತೆ ಕೋಣೆಯೊಳಗೆ !

ಮಗಳ ಮಾತನು ಕೇಳಿ ನಕ್ಕು ಬಿಟ್ಟರು ತಂದೆ;
ಒಳಗೆ ನಂದಾದೀಪ ನಂದಿಹೋಗಿ,

ಫಲವ ನುಡಿದುದು ಹಲ್ಲಿ; ಹೇಳಲೇನಿದೆ ಮುಂದೆ !
ತಿರಳಿದನು ಜೋಯಿಸನು ತಣ್ಣಗಾಗಿ.

ಬೆಳಗಾಗಿ ಕೆರೆಯಬಳಿ ನನ್ನ ತಂಗಿಯ ಕಂಡು
ಕನ್ನೆ ತೋರಿದಳಂತೆ ಕಾರಣವನು—
"ಹೊನ್ನೂರ ಕೇರಿಯಲಿ ಬಂದಿದ್ದ ಹೊಸ ಗಂಡು
ತನ್ನ ಕೂದಲಿಗಿಂತ ಕಪ್ಪು" ಎಂದು.

ನಮ್ಮೂರಿನಕ್ಕರೆಯ ಸಕ್ಕರೆಯ ಬೊಂಬೆಯನು
ನೋಡಬೇಕೇ ಇಂಥ ಕಪ್ಪು ಗಂಡು ?
ಶಾನುಭೋಗರ ಮನೆಯ ತೋರಣವೆ ಹೇಳುವುದು
ಬಂದದಾರಿಗೆ ಸುಂಕವಿಲ್ಲವೆಂದು.

ಶಾನುಭೋಗರ ಮಗಳು ರತ್ನದಂತಹ ಹುಡುಗಿ;
ಗಂಡುಸಿಕ್ಕುವುದೊಂದು ಕಷ್ಟವಲ್ಲ;
ಸರಿಯಾದ ಗಂಡೊದಗಿ ಹೆಣ್ಣು ಸುಖವಾಗಿರಲಿ,
ತಡವಾದರೇನಂತೆ ?— ನಷ್ಟವಿಲ್ಲ,

— ಕೆ. ಎಸ್. ನರಸಿಂಹಸ್ವಾಮಿ

# ಪರಿಚಯ

ಶ್ರೀಮಾನ್ ಕೆ. ಎಸ್. ನರಸಿಂಹಸ್ವಾಮಿಯವರು ಮೈಸೂರಿನವರು. ಉದಯೋನ್ಮುಖ ಕವಿಗಳಲ್ಲಿ ಹೆಸರಾದವರು. ಇವರ ಸುಂದರ ಗೀತಸಂಗ್ರಹವಾದ '**ಮೈಸೂರ ಮಲ್ಲಿಗೆ**' ಯನ್ನು ಓದಿ ಮೆಚ್ಚದವರು ಇಲ್ಲ. ಇವರು 'ಐರಾವತ' ವೆಂಬ ಇನ್ನೊಂದು ಗೀತಸಂಗ್ರಹವನ್ನೂ ಪ್ರಕಟಿಸಿದ್ದಾರೆ.

ಇವರ ಹಾಡುಗಳಲ್ಲಿ ಮೆಲುನಗೆ ನಯವಾಗಿ ಬೆರೆತಿರುವದು. ಶಾನುಭೋಗರ ಮಗಳ ಸಹಜ ಸೌಂದರ್ಯವೂ, ಸರಳ ಜೀವನವೂ ಇಲ್ಲಿ ಸೊಗಸಾಗಿ ನಿರೂಪಿತವಾಗಿವೆ.

**ಅಭ್ಯಾಸ:—**

**ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—**

೧) ಶಾನುಭೋಗರ ಮಗಳು ಎಂತಹ ಹುಡುಗಿ ?

೨) ಅವಳು 'ಬಲುಜಾಣೆ' 'ಗಂಭೀರೆ' ಎಂಬುದನ್ನು ಹೇಗೆ ಸಮರ್ಥಿಸುವಿರಿ ?

೩) ಈ ಗೀತದಲ್ಲಿ ಬಂದಿರುವ ವಿನೋದದ ಮಾತುಗಳನ್ನು ಹೇಳಿರಿ.

೪) ಶಾನುಭೋಗರ ಮಗಳ ವಿಷಯವಾಗಿ ಕವಿಯ ಬಯಕೆ ಏನು ? ಮತ್ತು ಏಕೆ ?

೫) ಕೆಳಗಿನ ಮಾತುಗಳಲ್ಲಿಯ ವಿಚಾರಗಳನ್ನು ವಿಸ್ತರಿಸಿ ಬರೆಯಿರಿ: [ಅ] ಮಿಂಚ ಬೀರುವ ಕಣ್ಣು ಒಮ್ಮೊಮ್ಮೆ ಕಣ್ಣೀರ ಸರಸಿಯಹುದು. [ಬ] ಫಲವ ನುಡಿದುದು ಹಲ್ಲಿ. [ಕ] ಬಂದ ದಾರಿಗೆ ಸುಂಕವಿಲ್ಲ.

**ಹೆಚ್ಚಿನ ಓದು:—**

ಶ್ರೀ ಪುಟ್ಟಪ್ಪನವರ 'ಕೊಳಲು' ಪುಸ್ತಕದಲ್ಲಿಯ "ಹಳ್ಳಿಯ ಹುಡುಗಿ" ಎಂಬ ಗೀತವನ್ನು ಓದಿರಿ.

# ೧೫. ಪ್ರಾರ್ಥನೆ

## ವಸಂತ

ನಿನ್ನ ನಾಡೀ ನಾಡು, ನಿನ್ನ ಮಕ್ಕಳು ನಾವು
ಎಮ್ಮನ್ನು ನೀ ನಡೆಸು ದಿಗ್ವಿಜಯಕೆ;
ಭಾರತಾಂಬುಧಿಯಲ್ಲಿ ಹೆರರು ಕಡೆದಿಹ ವಿಷವ
ಇನ್ನೊಮ್ಮೆ ನೀ ಕುಡಿದು ಕಾಪಿಡಯ್ಯ—

ನಿನ್ನ ಹಣೆಗಣ್ಣೋಟ ಎಮ್ಮಂತರಂಗಗಳ
ಮಡಿಕೆ ಮಡಿಕೆಗಳಲ್ಲು ಸುಳಿದು ಬರಲಿ;
ಎಮ್ಮ ಎಮ್ಮೊಳು ಬಲಿತ ವಿಷಮಸ್ಪೃಶ್ಯತೆಗಳನು
ಸುಟ್ಟು ನೈರ್ಮಲ್ಯಗಳನಿಡಿಸಲಯ್ಯ—

ಹಿಂದು ಸಿಕ ಪಾರ್ಸೀಕ ಮುಸ್ಲಿಮ್ಮ ಕ್ರೈಸ್ತರನು
ಸಿಂಹಳರ ಗೂರಖರ ಗಡಣಗಳನು
ಒಮ್ಮತದ ದೃಢದಲ್ಲಿ ಚಲದಲ್ಲಿ ನಡೆಸಯ್ಯ
ಸ್ವಾತಂತ್ರ್ಯ ಜೀವನಕೆ ಸುಮ್ಮಾನಕೆ—

ನಿನ್ನ ನಾಯಕ ನೋಟ ಮುಂದೆ ದಾರಿಯ ಬೆಳಗಿ
ಎಮ್ಮ ನಡೆಯನಾ ನೇರ ಕೊಂಡೊಯ್ಯಲಿ;
ಒಂದು ನೆತ್ತರ ಬಿಂದು ಧಮನಿಯಲ್ಲುಳ್ಳನಕ
ಒಂದುಸಿರು ನಿಲ್ವನಿತು ಶಕ್ತಿಯಿರುವನಕ—

ನಿನ್ನ ಡಮರುಗ ರವವು ದಿಕ್ಕುಗಳ ನಡುಗಿಸಲಿ
ನಿನ್ನ ಮೊನೆ ತ್ರೈಶೂಲವಿರಿಯಿರಿಯಲಿ;

ನಿನ್ನ ನಗೆ ಮಕ್ಕಳಿಗೆ ಗೆಲ್ವಬಲನೀಯುತ್ತೆ
ನಿನ್ನ ಕೋಪವು ಅರಿಯ ಮದವುರಿಸಲಿ.

ಇಷ್ಟು ದಿನ ಪ್ರಾಚೀನ ಕರ್ಮವನ್ನುಂಡಾಯ್ತು
ಘಾತಕರ ಪಾತಕವ ಭೋಗಿಸಾಯ್ತು;
ಎಮ್ಮ ಸೋದರರಕ್ತ ಹರಿಸಿ ಮಿಂದಾಳಾಯ್ತು
ಜನತೆ ಮಾನವ ಮಾರಿ ತಿರಿದುದಾಯ್ತು

ಎಮ್ಮ ಮನೆಗಳ ಭಾಗ್ಯ ಹೆರವರಿಗೆ ತೆತ್ತಾಯ್ತು
ಅವರ ಎಂಜಲನುಂಡು ಬಾಳಿಯಾಯ್ತು;
ಎಮ್ಮ ಗಂಡನು ಹೀರಿ ದಾಸ್ಯಕ್ಕೆ ದೂಡಿದರ
ಪಾದಘಾತವನೆದೆಯಲಾಂತುದಾಯ್ತು—

ನಿನ್ನ ಜಟೆಯಲಿ ಹರಿವ ದಿವ್ಯ ಗಂಗೆಯ ಕಳುಹಿ
ಎಮ್ಮ ಕರಣಗಳನ್ನು ಶುಚಿಗೈಯಿಸು;
ನಿನ್ನ ಪ್ರೇಮವು ಮರಳಿ ಎಮ್ಮ ಕಾಯುವದೆಂದು
ಭರವಸೆಯು ಬರುವಂತೆ ಕರುಣಿಸಯ್ಯ –

ನಿನ್ನ ಮರವಾಣಗಳು ಎಮ್ಮ ಎದೆವೊಳಪೊಕ್ಕು
ಅಲ್ಲಿರುವ ಬಂಜೆತನ ಕಳೆಯಲಯ್ಯ;
ಬಲದಾನ ಜಯದಾನ ಗೈದೆಮ್ಮ ನಡೆಸು ಬಾ
ಹೊಸ ರಾಷ್ಟ್ರ ಜೀವನದ ಸಾಧನಕ್ಕೆ—

ನಾವಿಟ್ಟ ಸಂಕಲೆಯ ಭಾರದಲಿ ಬಾಗಿರುವ
ಭಾರತಿಯ ಬಿಡುಗಡೆಗೆ ನಡೆಸೆಮ್ಮನು;
ನಾಳೆ ಹುಟ್ಟುವ ಮಕ್ಕಳಿಂದಾದರೂ ಈ ನಾಡು
ಸ್ವಾತಂತ್ರ್ಯ ಸ್ವರ್ಗದಂತಾಗುವಂತೆ—

—ಶಿ. ಸೀ.

# ಪರಿಚಯ

ವಿ. ಸೀತಾರಾಮಯ್ಯ ಎಂಬುದು ಇವರ ಪೂರ್ಣ ಹೆಸರು ವಿ ಸೀ. ಎಂಬುದು ಇವರ ಕಾವ್ಯನಾಮ. ಇವರು ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. ಇವರು ಪ್ರತಿಭಾವಂತ ಕವಿಗಳೂ, ವಾಗ್ಮಿಗಳೂ ಕುಶಲರಾದ ಪ್ರಬಂಧ ಲೇಖಕರೂ ಆಗಿದ್ದಾರೆ.

ಉತ್ತಮವಾದ ವಿಚಾರಗಳನ್ನು ಸರಳವಾಗಿಯೂ ಗಂಭೀರವಾಗಿಯೂ ಹೇಳುವ ರೀತಿ ಇವರದು. ವಿಶಾಲ ಹೃದಯದಂತೆಯೇ ವಿಶಾಲವಾದ ಕಾವ್ಯದೃಷ್ಟಿ ಇದೆ. ಇವರು 'ಗೀತಗಳು' 'ದೀಪಗಳು' 'ನೆಳಲು ಬೆಳಕು' ಮೊದಲಾದ ಸುಂದರವಾದ ಗೀತಸಂಗ್ರಹಗಳನ್ನೂ, 'ಆಗ್ರಹ' ಎಂಬ ನಾಟಕವನ್ನೂ, 'ಹಣ ಪ್ರಪಂಚ' ಎಂಬ ಅರ್ಥ ಶಾಸ್ತ್ರದ ಪುಸ್ತಕವನ್ನೂ 'ಪಂಪಾಯಾತ್ರೆ' ಎಂಬ ಪ್ರಬಂಧ ಗ್ರಂಥವನ್ನೂ ಬರೆದು ಪ್ರಕಟಿಸಿದ್ದಾರೆ.

ಈ ಗೀತವನ್ನು ವೀ. ಸೀ. ಅವರ 'ದೀಪಗಳು' ಎಂಬ ಸಂಗ್ರಹದಿಂದ ಆಯ್ದುಕೊಂಡಿದೆ. ಪ್ರತಿಯೊಬ್ಬ ಭಾರತೀಯನ ಅಂತಃಕರಣದ ಅನುಭವವನ್ನೇ ಈ ಪ್ರಾರ್ಥನೆಯಲ್ಲಿ ಕವಿಗಳು ಸುಂದರವಾಗಿ ಚಿತ್ರಿಸಿದ್ದಾರೆ. ನಮ್ಮ ಹಿಂದಿನ ಹೀನತೆಯನ್ನು ತೋರಿಸಿ, ಇಂದಿನ ತಿಕ್ಕಾಟವನ್ನು ನಿರೂಪಿಸಿ, ನಮಗೆ ಬೇಕಾಗುವ ಧೀರವೃತ್ತಿಯ ಅರಿವನ್ನುಂಟುಮಾಡಿ, ವೀರಪ್ರತಿಜ್ಞೆ ಮಾಡ ಹಚ್ಚುವ ಆವೇಶವು ಈ ಕವಿತೆಯಲ್ಲಿ ನಿನದಿಸುತ್ತದೆ

**ಟಿಪ್ಪಣಿ:—**

ಕಾ: ಪಿಡು, ರಕ್ಷಿಸು; ಗಡಣ, ಸಮೂಹ; ಸುಮ್ಮಾನ, ಆನಂದ ಧಮನಿ. ರಕ್ತನಾಳ; ಮೊನೆ, ಚೂಪಾಗ.

**ಅಭ್ಯಾಸಃ—**

### ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

(೧) ಇಲ್ಲಿ ಕವಿಯು ಯಾವ ಭಾವನೆಯಿಂದ ಪ್ರೇರಿತನಾಗಿದ್ದಾನೆ ?

(೨) ಇದರಲ್ಲಿಯ ಮುಖ್ಯ ವಿಚಾರಗಳನ್ನು ಸಂಗ್ರಹಿಸಿ ಬರೆಯಿರಿ.

(೩) ವಿಷಪಾನ, ಹಣೆಗಣ್ಣೋಟ, ಡಮರುಗ ಮತ್ತು ಜಟೆ ಇವುಗಳನ್ನು ಕವಿಯು ಯಾವ ವಿಚಾರಗಳನ್ನು ವ್ಯಕ್ತಪಡಿಸಲು ಬಳಸಿದ್ದಾನೆ ?

(೪) ೬ ಮತ್ತು ೭ನೆಯ ಪದ್ಯಗಳ ಸರಳಾನುವಾದವನ್ನು ಬರೆಯಿರಿ.

(೫) ೯ ಮತ್ತು ೧೦ನೆಯ ಪದ್ಯಗಳಲ್ಲಿ ಅಡಕವಾಗಿರುವ ಮುಖ್ಯ ಭಾವನೆಗಳು ಯಾವವು ?

(೬) ಭಾರತೀಯರಲ್ಲಿಯ ಯಾವ ದೋಷಗಳನ್ನು ಕವಿಯು ಸೂಚಿಸಿದ್ದಾನೆ ?

(೭) ಕೊನೆಯ ಪದ್ಯವನ್ನು ಇಂದಿನ ಪರಿಸ್ಥಿತಿಯನ್ನನುಲಕ್ಷಿಸಿ ಹೇಗೆ ತಿದ್ದಬಹುದು ?

(೮) ಈ ಗೀತದಲ್ಲಿಯ ಸುಂದರವಾದ ಪದಗಳನ್ನು ಆರಿಸಿ ಬರೆಯಿರಿ.

(೯) ಕೆಲವು ಪ್ರಾರ್ಥನೆಯ ಗೀತಗಳನ್ನು ಸಂಗ್ರಹಿಸಿರಿ.



## ಶಿಕ್ಷಣ ಪ್ರಚಾರ ಸಾಹಿತ್ಯ ಸಮಿತಿಯ ಸದಸ್ಯರು:

ಶ್ರೀ. ವಾ. ಹು. ನಾಗರಹಳ್ಳಿ ಎಂ. ಎ. ಬಿ ಟಿ

ವಿದ್ವಾನ್ ಗು ಜ. ಮಂಗಲಗಿ ಎಂ ಎ. ಬಿ. ಓ. ಎಲ್. ಬಿ. ಟಿ.

ಶ್ರೀ. ಗು. ಗು ಕುಲಕರ್ಣಿ ಎಂ. ಎ., ಬಿ. ಟಿ. ಡಿ. ಬಿ. ಈ.

ವಿದ್ವಾನ್ ರಾ ಗು. ಕುಲಕರ್ಣಿ ಎಂ. ಎ. (ಬನಾರಸ)

ಶ್ರೀ. ಲ ಹ ದೇಸಾಯಿ ಬಿ ಎ (ಆನರ್ಸ)ಬಿ. ಟಿ. ಡಿ. ಬಿ. ಈ

ಶ್ರೀ. ಗು. ಉ. ದೇಶಪಾಂಡೆ ಬಿ. ಎ ಬಿ. ಟಿ.

ವಿದ್ವಾನ್ ಮ ಗು ಕುಲಕರ್ಣಿ ರಾ. ಭಾ ಪಾರಂಗತ.

### ಸಮಿತಿಯ ಇತರ ಪ್ರಕಟನೆಗಳು

| | |
|---|---|
| ಸಾಹಿತ್ಯ ವಿಹಾರ ಭಾಗ ೨. | ೧—೪—೦ |
| ಸಾಹಿತ್ಯ ವಿಹಾರ ಭಾಗ ೩. | ೨—೨—೦ |
| ಭಾಷಾ ವಿಕಾಸ ಭಾಗ ೧. | ೦—೬—೦ |
| ರಾಷ್ಟ್ರಧ್ವಜ (ನಾಟಕ) | ೦—೪—೦ |

ವಿಳಾಸ:— ಶ್ರೀ. ಜಿ. ಜಿ ಕುಲಕರ್ಣಿ,
ಅಜರೇಕರ ಚಾಳ, ವಿಜಾಪೂರ